Vol - 9 February 2010 Issue No. 02 Rs. 5.00/-



# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine



ಕರ್ನಾಟಕದ ಸಮಸ್ತರಿಗೂ ಯುಗಾದಿ ಹಬ್ಬದ ಹಾರ್ದಿಕ ಶುಭಾಶಯಗಳು



. Kondajji B. Shanmukhappa, State Chief mmissioner, The Bharat Scouts & Guides rnataka presented a Bouquet & Cheque of pees Three lakhs to Sri. B.S. Yeddyurappa n'ble Chief Minister of Karnataka & esident, The Bharat Scouts & Guides rnataka towards the Karnataka Flood Relief nd on 23rd February 2010 at Vidhana adha, Bangalore.



Sri Rameshwar Thakur, His Excellency the Governor of Madhya Pradhesh & President, The Bharat Scouts & Guides, India is seen with Sri. P.G.R. Sindhia, Vice President, B S&G Karnataka & Former Minister for Finance, Sri Kondajji B. Shanmukhappa, State Chief Commissioner, Sri. T.S. Lucas, State Commissioner (Scouts), Sri T.Prabhakar, State Treasurer & Officials of State & Districts on 18th February 2010 at Rajbhavan, Bangalore.



i. S. Suresh Kumar, Hon'ble Minister for Law ustice & Urban Development Department ovt. of Karnataka presenting the Ratrapathi ward Certificate to a Scout at the Republic Day nction held on 26th January 2010 at Tumkur.



Sri. Basavaraj Bommai, Hon'ble Minister for Major & Medium Irrigation, Govt. of Karnataka presenting prize to a Guide for the Best Marchpast at the Republic day function held on 26th January 2010 at Belgaum.







ಶ್ರೀ ಐ.ಎಮ್. ವಿಠಲಮೂರ್ತಿ, ಕಾರ್ಯದರ್ಶಿ, ಯುವಜನ ಸೇವೆ ಹಾಗೂ ಕ್ರಿಡಾ ಇಲಾಖೆ ಇವರು ದಿನಾಂಕ 22-2-2010ರಂದು ಶಾಂತಿ ಗೃಹದಲ್ಲಿ ನಡೆದ ವಿಶ್ವ ಸ್ಕೌಟ್ ದಿನ ಹಾಗೂ ಚಿಂತನಾ ದಿನದ ಆಚರಣೆಯಲ್ಲಿ ಸ್ಕೌಟ್ ಮತ್ತು ಗೈಡ್ ಸಂದೇಶ ಒಳಗೊಂಡ ಭಿತ್ತಿಪತ್ರವನ್ನು ಬಿಡುಗಡೆ ಮಾಡುತ್ತಿರುವುದು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ವೈ.ಆರ್. ಕಾಂತರಾಜೇಂದ್ರ, ಜಂಟಿ ನಿರ್ದೇಶಕರು ಯುವಜನ ಸೇವಾ ಇಲಾಖೆ, ಶ್ರೀ ಟಿ.ಎಸ್. ಲೂಕಾಶ್, ರಾಜ್ಯ ಆಯುಕ್ತರು (ಸ್ಕೌಟ್ಸ್), ಶ್ರೀ ಟಿ. ಪ್ರಭಾಕರ್, ರಾಜ್ಯ ಕೋಷಧಿಕಾರಿ ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನು ಕಾಣಬಹುದು.




ಶ್ರೀ ಐ.ಎಮ್. ವಿಠಲಮೂರ್ತಿ, ಕಾರ್ಯದರ್ಶಿ, ಯುವಜನ ಸೇವೆ ಹಾಗೂ ಕ್ರಿಡಾ ಇಲಾಖೆ ಇವರು ದಿನಾಂಕ 22-2-2010ರಂದು ಶಾಂತಿ ಗೃಹದಲ್ಲಿ ನಡೆದ ವಿಶ್ವ ಸ್ಕೌಟ್ ದಿನ ಹಾಗೂ ಚಿಂತನಾ ದಿನದ ಮುಕ್ತಾಯ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಶುಭಕೋರಿದರು.



ಶ್ರೀ ಶಿವನಂಜಯ್ಯ, ನಿರ್ದೇಶಕರು, ಯುವಜನ ಸೇವಾ ಹಾಗೂ ಕ್ರಿಡಾ ಇಲಾಖೆ ಇವರು ದಿನಾಂಕ 22-2-2010ರಂದು ಶಾಂತಿ ಗೃಹದಲ್ಲಿ ನಡೆದ ವಿಶ್ವ ಸ್ಕೌಟ್ ದಿನ ಹಾಗೂ ಚಿಂತನಾ ದಿನಾಚರಣೆಯನ್ನು ಉದ್ಘಾಟಿಸುತ್ತಿರುವುದು. ಶ್ರೀ ಆರ್.ಎಲ್. ಪಟೇಲ್ ಜಂಟಿ ನಿರ್ದೇಶಕರು (ತರಬೇತಿ) ಸಮಾರಂಭದಲ್ಲಿ ಭಾಗವಹಿಸಿದರು



ದಿನಾಂಕ 03 ರಿಂದ 06.02.2010ರವರೆಗೆ ಬಳ್ಳಾರಿಯಲ್ಲಿ ನಡೆದ ರಾಜ್ಯ ಮಟ್ಟದ ಯುವ ಮೇಳದಲ್ಲಿ 'ಚೈತನ್ಯ ಸಿಂಧು' ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಲಾಯಿತು. ಡಾ. ಹೆಚ್. ಬಾಲರಾಜು, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ, ಶ್ರೀ ಲಕ್ಷ್ಮಣ್, ಸೀನಿಯರ್ ಮ್ಯಾನೇಜರ್ ಎನ್.ಎಂ.ಡಿ.ಸಿ., ಶ್ರೀ ಆರ್. ವೆಂಕಣ್ಣ, ಶ್ರೀ. ಎಂ.ಎಂ. ಲೊಂಡೆ, ಜಿಲ್ಲಾ ಮುಖ್ಯ ಆಯುಕ್ತರುಗಳು, ಶ್ರೀ ಎಂ.ಎ. ಚೆಲ್ಲಯ್ಯ, ಸ್ಥಾನಿಕ ಆಯುಕ್ತರು ಹಾಗು ಇತರರನ್ನು ಕಾಣಬಹುದು.



ದಿನಾಂಕ 29 ಜನವರಿಯಿಂದ 2 ಫೆಬ್ರವರಿ 2010ರವರೆಗೆ ಚೆನ್ನೈನಲ್ಲಿ ನಡೆದ 62ನೇ ರಾಜ್ಯ ಮಟ್ಟದ ಹಿಮಾಲಯ ವೃಕ್ಷಮಣಿದಾರರ ಸಮಾವೇಶದಲ್ಲಿ ಶ್ರೀ ಚಿನ್ನಸ್ವಾಮಿ ರೆಡ್ಡಿ, ಬರಹಗಾರರು ಇವರು ಮಾತನಾಡುತ್ತಿರುವುದು. ಶ್ರೀ ವಿ. ಕಾರ್ಲಸ್, ರಾಜ್ಯ ಮುಖ್ಯ ಆಯುಕರು, ದಕ್ಷಿಣ ರೈಲ್ವೆ ಸ್ಕೌಟ್ಸ್ ಮತ್ತು ಗೈಡ್ಸ್, ಶ್ರೀ ಟಿ. ಬಾಲಸುಬ್ರಮಣ್ಯಮ್, ನಿರ್ದೇಶಕರು ಎಪಿಟಿ ಎಸ್.ಸಿ.ಎಸ್.ಎಲ್, ಶ್ರೀ ಎಸ್. ಅನ್‌ಬರಸನ್, ಶ್ರೀಮತಿ ಎಮ್. ಇಂದ್ರಾಣಿ, ರಾಜ್ಯ ಸಂಘಟನಾ ಆಯುಕ್ತರುಗಳು ದಕ್ಷಿಣ ರೈಲ್ವೆ ಬಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇವರುಗಳನ್ನು ಕಾಣಬಹುದು.

# Editor's desk

"I have had a most happy life and I want each one of you to have as happy a life too" B.P in his last message.

Founder was very clear about the purpose of Scout / Guide movement and he wanted all of us should not only be happy but to a/sò make the surroundings where we live also happy.

Scouting Guiding is a movement.....on the move - with proposed activities which young people themselves should take part in designing. Young people learn to live and work together. They are involved in decision making, accepting responsibility, developing cooperation and leadership.

This leads to happiness of young minds, they feel proud and would want to lead their groups and serve the society at large, with good turns towards the community they live. The response they receive from public and encouragement by adult leaders, gives them a chance to learn more.

In our capacity as adult leaders of The Bharat Scouts & Guides, let's understand our role and facilitate the young people to grow according to their decisions in a positive and right direction. We have to just stand behind them and motivate them to lead their life.

We have to forget the differences if any among our selves and come out to set an example of our leadership. This gives another dimension in our growth as individual and also to learn the needs of young people. By playing right role of adult leaders, we are taking the Scout/Guide Movement to more young people. Thus start bringing in more young people in the movement with renewal of all Open Units/School Units, registering new open units in residential areas/ rural and urban level and schools where no Scout / Guide units exist.

Then our actions will speak louder about the happiness we are spreading through the Scout / Guide Movement as BP said in his last message.

Happy "World Scout Day/ Thinking Day" and lets do a good turn on the occasion by registering one more Scout/ Guide unit

Happy Scouting / Guiding,

M.A. KHALID
State Secretary

# ಮುಖ್ಯ ಆಯುಕ್ತರ ನುಡಿ....

ಮುಖ್ಯ ಆಯುಕ್ತರ ನುಡಿ...

ಮಾನ್ಯರೆ,

ರಾಜ್ಯ ಗೈಡ್ ಆಯುಕ್ತೆಯಾಗಿದ್ದ ದಿನಾಂಕ 30-1-2010 ರಂದು ಶ್ರೀಮತಿ ರವಿ ವೆಸ್ಲಿಯವರ ಅಕಾಲಿಕ ನಿಧನದಿಂದ ಸ್ಕೌಟ್ ಮತ್ತು ಗೈಡ್ ಚಳವಳಿಗೆ ತುಂಬಲಾರದ ನಷ್ಟವಾಗಿದೆ. ಸ್ಕೌಟ್-ಗೈಡ್ ಚಳವಳಿಯಲ್ಲಿ ಕಳೆದು ಐದು ದಶಕಗಳ ಕಾಲ ವಿವಿಧಹಂತದಲ್ಲಿ ನಿಸ್ಪೃಹ ಸೇವೆ ಸಲ್ಲಿಸಿ, ಕಳೆದ ಒಂದೂವರೆ ವರ್ಷಗಳ ಕಾಲ ರಾಜ್ಯ ಗೈಡ್ ವಿಭಾಗದ ಮುಖ್ಯಸ್ಥೆಯಾಗಿ, ರಾಜ್ಯದ ಹಿರಿಯ ತರಬೇತಿ ನಾಯಕಿಯಾಗಿ ಕ್ರಿಯಾತ್ಮಕವಾಗಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸಿದ್ದ ಶ್ರೀಮತಿ ರವಿ ವೆಸ್ಲಿ ನಮ್ಮೊಂದಿಗೆ ದೈಹಿಕವಾಗಿ ಇನ್ನಿಲ್ಲ ಎಂಬುದು ನಂಬಲಾಗದ ವಿಷಯ. ವಿದ್ಯಾರ್ಥಿ ದೆಸೆಯಲ್ಲಿ ಗೈಡ್ ಆಗಿ, ಗೈಡರ್ ಆಗಿ, ಸಂಘಟನಾ ಹಾಗೂ ತರಬೇತಿ ಆಯುಕ್ತೆಯಾಗಿ - ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್ಸ್) ಆಗಿ, ರಾಷ್ಟ್ರೀಯ ಕಾರ್ಯಕಾರಿ ಸಮಿತಿ ಸದಸ್ಯೆಯಾಗಿ, ರಾಜ್ಯ ಸ್ಥಾನಿಕ ಆಯುಕ್ತೆಯಾಗಿ, ರಾಜ್ಯ ಗೈಡ್ ಆಯುಕ್ತೆಯಾಗಿ ಅವರು ಚಳವಳಿಯ ಬೆಳವಣಿಗೆಗೆ ಸಲ್ಲಿಸಿದ ಸೇವೆ ಅಪಾರ.

ಕೊನೆಯ ಕ್ಷಣದ ವರೆವಿಗೂ ಸ್ಕೌಟ್-ಗೈಡ್ ಚಳವಳಿಯ ಔನ್ನತ್ಯದ ಬಗ್ಗೆ ಚಿಂತಿಸುತ್ತಿದ್ದ ಹಿರಿಯ ಸಹೋದ್ಯೋಗಿ ಶ್ರೀಮತಿ ರವಿವೆಸ್ಲಿ ಅವರ ನಿಧನ ಅತ್ಯಂತ ಅನಿರೀಕ್ಷಿತ. ಅವರು ಆಸ್ಪತ್ರೆಯಲ್ಲಿದ್ದಾಗ ಮೂರು-ನಾಲ್ಕು ಬಾರಿ ಅವರನ್ನು ಭೇಟಿ ಮಾಡಿದಾಗ ಅವರ ಮನಸ್ಸಿನ ದುಗುಡ ಹೃದಯ ಮಿಡಿಯುವಂತಿತ್ತು. ರಾಷ್ಟ್ರೀಯ ಆಯುಕ್ತರು, ನಿರ್ದೇಶಕರು ಹಲವಾರು ರಾಜ್ಯ ಸಂಸ್ಥೆಗಳು, ಜಿಲ್ಲೆ ಹಾಗೂ ಸ್ಥಳೀಯ ಸಂಸ್ಥೆಗಳು ಶ್ರೀಮತಿ ರವಿವೆಸ್ಲಿ ಅವರ ಅಕಾಲಿಕ ನಿಧನಕ್ಕೆ ಸಂತಾಪ ಸಚನೆಯನ್ನು ಕಳುಹಿಸಿ ಅವರ ಆತ್ಮಕ್ಕೆ ಚಿರಶಾಂತಿ ಕೋರಿದ್ದಾರೆ. ರಾಜ್ಯ ಸಂಸ್ಥೆಯ ಎಲ್ಲಾ ಉಪಸಮಿತಿಗಳಲ್ಲಿ ರಾಜ್ಯ ಹಣಕಾಸು ಹಾಗೂ ರಾಜ್ಯ ಕಾರ್ಯಕಾರಿ ಸಮಿತಿಯಲ್ಲಿ ಹಾಗೂ ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ ದಿನಾಂಕ: 18-02-2010 ರಂದು ಜರುಗಿದ ಶ್ರದ್ಧಾಂಜಲಿ ಸಭೆಯಲ್ಲಿ ಅವರೊಂದಿಗೆ ನಿಕಟವಾಗಿ ಹಲವಾರು ದಶಕಗಳ ಕಾಲ ಸೇವೆ ಸಲ್ಲಿಸಿದ ರಾಜ್ಯದ ಹಲವಾರು ಜಿಲ್ಲೆಗಳ ಸ್ಕೌಟ್-ಗೈಡ್ ನಾಯಕರುಗಳು, ಕಾರ್ಯಕರ್ತರುಗಳು ಶ್ರೀಮತಿ ರವಿವೆಸ್ಲಿ ಅವರು ಚಳವಳಿಗೆ ಸಲ್ಲಿಸಿದ ಸೇವೆಯನ್ನು ಸ್ಮರಿಸಿ ಶ್ರದ್ಧಾಂಜಲಿ ಅರ್ಪಿಸಿದರು. ನಮ್ಮೆಲ್ಲರ ಹಿರಿಯರೂ - ರಾಜ್ಯ ಸಂಸ್ಥೆ ಉಪಾಧ್ಯಕ್ಷರುಗಳಾದ ಶ್ರೀಮತಿ ಎಂ.ಜಿ. ಬೋಪಯ್ಯ, ಶ್ರೀಮತಿ ಸರೋಜ ವಿ. ನಾಯ್ಡು ಹಾಗೂ ರಾಜ್ಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಸಭೆಯಲ್ಲಿ ಹಾಜರಿದ್ದು ಅಗಲಿದ ಗೈಡ್ ನಾಯಕಿಗೆ ಶ್ರದ್ಧಾಂಜಲಿ ಅರ್ಪಿಸಿದರು.

ಬಳ್ಳಾರಿಯಲ್ಲಿ ದಿನಾಂಕ: 6-2-2010 ರಂದು ಜರುಗಿದ ರಾಜ್ಯಮಟ್ಟದ ಯುವ ಮೇಳದಲ್ಲಿ ಭಾಗವಹಿಸಿ ಚಳವಳಿಯ ಅತ್ಯುನ್ನತ ಪದಕ ಪ್ರಶಸ್ತಿ ಪಡೆಯಲು ಭಾಗವಹಿಸಿದ ಎಲ್ಲಾ ಸ್ಕೌಟ್-ಗೈಡ್‌ಗಳಿಗೆ ಶುಭಕೋರಿದ್ದೇನೆ. ಸಮಾರಂಭದಲ್ಲಿ ಭಾಗವಹಿಸಿದ ಜಿಲ್ಲಾ ಪಂಚಾಯ್ತಿ ಅಧ್ಯಕ್ಷರಾದ ಶ್ರೀ ರುದ್ರಗೌಡ ಹಾಗು ವಿಜಯನಗರ ವೈದ್ಯಕೀಯ ಮಹಾವಿದ್ಯಾಲಯದ ನಿರ್ದೇಶಕರಾದ ಡಾ. ಬಿ. ದೇವಾನಂದ್ ಅವರುಗಳನ್ನು ಬಳ್ಳಾರಿ ಜಿಲ್ಲಾ ಸಂಸ್ಥೆಗೆ ಚಳವಳಿಯ ತತ್ತ್ವ-ನೀತಿಗಳನ್ನು ಯುವ ಜನಾಂಗಕ್ಕೆ ತಲುಪಿಸಲು ಹೆಚ್ಚಿನ ನೆರವು ನೀಡಲು ಕೋರಿದ್ದೇನೆ.

ದಿನಾಂಕ : 7-2-2010 ರಂದು ಚಿತ್ರದುರ್ಗ ಜಿಲ್ಲೆ ಹಿರಿಯೂರಿನಲ್ಲಿ ಸ್ಥಳೀಯ ಸಂಸ್ಥೆ ಏರ್ಪಡಿಸಿದ ರ್‍ಯಾಲಿಯಲ್ಲಿ ಭಾಗವಹಿಸಿ - ಸಂಸ್ಥೆಯ ಪರವಾಗಿ ರಾಜ್ಯದ ಸಮಾಜ ಕಲ್ಯಾಣ ಇಲಾಖೆಯ ಸಚಿವರೂ ಹಾಗೂ ಹಿರಿಯೂರು ತಾಲ್ಲೂಕಿನ ವಿಧಾನಸಭಾ ಸದಸ್ಯರಾದ ಸನ್ಮಾನ್ಯ ಶ್ರೀ ಸುಧಾಕರ್ ಅವರಿಗೆ ರಾಜ್ಯ ಸಂಸ್ಥೆಯ ಪರವಾಗಿ ರ್‍ಯಾಲಿಯನ್ನು ಯಶಸ್ವಿಗೊಳಿಸುವಲ್ಲಿ ಎಲ್ಲಾ ವಿಧವಾಗಿ ಸಹಕರಿಸಿದ್ದಕ್ಕೆ ಕೃತಜ್ಞತೆ ಸಲ್ಲಿಸಿ, ಚಿತ್ರದುರ್ಗ ಜಿಲ್ಲಾ ಪಂಚಾಯ್ತಿಯಿಂದ ಜಿಲ್ಲಾ ಸಂಸ್ಥೆಗೆ ಅನುಕೂಲವಿಲ್ಲದ ಅರ್ಹ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಚಳವಳಿಗೆ ಸೇರಲು ಹಾಗೂ ಅವರಿಗೆ ಸ್ಕೌಟ್-ಗೈಡ್ ಸಮವಸ್ತ್ರ ನೀಡಲು ಪ್ರತಿವರ್ಷ ರೂ. 5. ಲಕ್ಷ ನಿಗದಿಪಡಿಸಲು ಕೋರಿದ್ದೇನೆ. ಸನ್ಮಾನ್ಯ ಸಚಿವರು ನನ್ನೀ ಮನವಿಗೆ ಸಕ್ರಿಯವಾಗಿ ಸ್ಪಂದಿಸಿರುತ್ತಾರೆ. ಚಿತ್ರದುರ್ಗ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರೂ ಹಾಗೂ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಶಂಕರಪ್ಪ ಅವರಿಗೆ, ಜಿಲ್ಲಾ ತರಬೇತಿ ಶಿಕ್ಷಣ ಸಂಸ್ಥೆ ಪ್ರಾಂಶುಪಾಲರಾದ ಶ್ರೀ ಮಲ್ಲಣ್ಣ ಅವರಿಗೆ, ಬಿ.ಎಡ್, ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಎನ್. ಹೆಚ್. ಕಟಕದೊಂಡ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಯಾದ ಶ್ರೀ ರೇವಣಸಿದ್ಧಪ್ಪ ಅವರಿಗೆ, ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ರ್‍ಯಾಲಿ ಸಕ್ರಿಯವಾಗಿ ನಡೆಸಲು ನೆರವಾಗಿದ್ದಕ್ಕೆ ಅಭಿನಂದನೆ ಸಲ್ಲಿಸಿದ್ದೇನೆ.

ದಿನಾಂಕ : 10-2-2010 ರಂದು ಡಾ. ಅನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ರಾಮನಗರ ಜಿಲ್ಲಾ ಸಂಸ್ಥೆಯವರು ಏರ್ಪಡಿಸಿದ್ದ ಮೂಲ ತರಬೇತಿ ಹಾಗು ಮುಂದುವರೆದ ತರಬೇತಿಗೆ ಜಿಲ್ಲೆಯ ಎಲ್ಲಾ ಭಾಗಗಳಿಂದ ಆಗಮಿಸಿದ್ದ 103 ಅಭ್ಯರ್ಥಿಗಳನ್ನು ಭೇಟಿಮಾಡಿ ಮುಂದಿನ ದಿನಗಳಲ್ಲಿ ಎಲ್ಲರೂ ವೃಕ್ಷಮಣಿಧಾರಿಗಳಾಗಲು ಕೋರಿದ್ದೇನೆ. ತರಬೇತಿ ನೀಡಲು ಆಗಮಿಸಿದ್ದ ಎಲ್ಲಾ ನಾಯಕರುಗಳಿಗೆ ಸಂಸ್ಥೆಯ ವಂದನೆ ಹೇಳಿದ್ದೇನೆ. ಜಿಲ್ಲಾ ಕಾರ್ಯದರ್ಶಿ ಶ್ರೀ ಶಿವನಂಜಪ್ಪ, ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಟಿ.ಎ. ಮಂಜುನಾಥಾಚಾರ್ ಶ್ರೀ ಭುವನೇಶ್ವರಪ್ಪ ಹಾಗೂ ತರಬೇತಿ ಶಿಬಿರ ಯಶಸ್ವಿಗೊಳಿಸಲು ಎಲ್ಲಾ ಸಹಾಯ - ಸಹಕಾರ ನೀಡಿದ ಜಿಲ್ಲಾ ಉಪನಿರ್ದೇಶಕರಿಗೆ, ಡಯಟ್ ಪ್ರಾಂಶುಪಾಲರು ಹಾಗೂ ಇತರ ಎಲ್ಲಾ ಸಿಬ್ಬಂದಿ ವರ್ಗಕ್ಕೆ - ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳಿಗೆ ಶುಭಕೋರಿದ್ದೇನೆ.

ದಿನಾಂಕ 18-02-2010 ರಂದು ಬೆಂಗಳೂರಿನ ರಾಜಭವನದಲ್ಲಿ ಸಂಸ್ಥೆಯ ರಾಷ್ಟ್ರೀಯ ಅಧ್ಯಕ್ಷರೂ - ಮಧ್ಯಪ್ರದೇಶದ ಗೌರವಾನ್ವಿತ ರಾಜ್ಯಪಾಲರಾದ ಸನ್ಮಾನ್ಯ ಶ್ರೀ ರಾಮೇಶ್ವರ್ ಠಾಕೂರ್‌ಜಿ ಅವರನ್ನು ನಾನು ಮತ್ತು ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಭೇಟಿಮಾಡಿ ಸಂಸ್ಥೆಯ ಕಾರ್ಯಚಟುವಟಿಕೆಗಳನ್ನು ಅವರ ಗಮನಕ್ಕೆ ತಂದಿದ್ದೇವೆ. ಸಂಸ್ಥೆಯ ಹಿರಿಯ ಉಪಾಧ್ಯಕ್ಷರೂ - ಕರ್ನಾಟಕ ಸರ್ಕಾರದ ಮಾಜಿ ಸಚಿವರಾದ ಶ್ರೀ ಪಿ.ಜಿ.ಆರ್. ಸಿಂಧಿಯಾ ಅವರು ನಮ್ಮೊಂದಿಗಿದ್ದು ಗೌರವಾನ್ವಿತ ರಾಜ್ಯಪಾಲರನ್ನು ಭೇಟಿ ಮಾಡಿದರು. ಗೌರವಾನ್ವಿತ ರಾಜ್ಯಪಾಲರು ಸ್ಕೌಟ್-ಗೈಡ್ ಚಳವಳಿ ಹಾಗೂ ತರಬೇತಿ ಕೇಂದ್ರಗಳ ಅಭಿವೃದ್ಧಿ ಬಗ್ಗೆ ಹೆಚ್ಚಿನ ಆಸ್ಥೆ ತೋರಿಸಿ, ಸಂಬಂಧಪಟ್ಟ ಅಧಿಕಾರಿಗಳೊಂದಿಗೆ ಮಾತನಾಡಿ ರಾಜ್ಯ ಸಂಸ್ಥೆಗೆ ನೆರವು ನೀಡಲು ಸೂಚಿಸಿದರು. ಮಧ್ಯಪ್ರದೇಶದ ರಾಜ್ಯಪಾಲರಾಗಿ - ಕರ್ನಾಟಕದಲ್ಲಿ ಸ್ಕೌಟ್-ಗೈಡ್ ಚಳವಳಿ ಬಗ್ಗೆ ವಿಶೇಷ ಮಮತೆ ತೋರಿದ ಗೌರವಾನ್ವಿತ ರಾಜ್ಯಪಾಲರಾದ ಶ್ರೀ ರಾಮೇಶ್ವರ ಠಾಕೂರ್‌ಜಿ ಅವರಿಗೆ ರಾಜ್ಯದ ಸ್ಕೌಟ್-ಗೈಡ್ ಗಳ ಹಾಗೂ ನನ್ನ ಸಹೋದ್ಯೋಗಿಗಳ ಪರವಾಗಿ ಹೃತ್ಪೂರ್ವಕ ಧನ್ಯವಾದಗಳು.

ದಿನಾಂಕ 19-02-2010 ರಂದು ಶಿವಾಜಿನಗರ ಸ್ಥಳೀಯ ಸಂಸ್ಥೆ ಏರ್ಪಡಿಸಿದ ಲಾರ್ಡ್ ಬೇಡನ್ ಪೋವೆಲ್ ಮತ್ತು ಶ್ರೀಮತಿ ಆಲೀವ್ ಬೇಡನ್ ಪೋವೆಲ್ ಅವರುಗಳು ಬೇರೆ ಬೇರೆ ಸಂದರ್ಭಗಳಲ್ಲಿ ಸ್ಕೌಟ್-ಗೈಡ್‌ಗಳಿಗೆ, ಚಳವಳಿಯ ನಾಯಕರುಗಳಿಗೆ ಹೇಳಿದ ಹೃದಯಾಂತರಾಳದ ಚಿಂತನಗಳ ವಿವರಗಳುಳ್ಳ ಪುಸ್ತಕಗಳ ಬಿಡುಗಡೆ ಸಮಾರಂಭದಲ್ಲಿ ಪಾಲ್ಗೊಂಡಿದ್ದೆ. ರಾಜ್ಯ ಸಹಾಯಕ ಆಯುಕ್ತೆಯಾಗಿ - ತರಬೇತಿ ನಾಯಕಿಯಾಗಿ, ರಾಷ್ಟ್ರೀಯ ಪರಿಷತ್ತಿನ ಸದಸ್ಯೆಯಾಗಿ ಹಲವು ದಶಕಗಳ ಕಾಲ ಸ್ಮರಣೀಯ ಸೇವೆ ಸಲ್ಲಿಸಿದ ಶ್ರೀಮತಿ ಮೈಥಿಲಿ ಸಂಪತ್ ಅವರು ಲಾರ್ಡ್ ಮತ್ತು ಲೇಡಿ ಬೇಡನ್ ಪೋವೆಲ್‌ರ ಚಿಂತನೆಗಳನ್ನು ಸಂಗ್ರಹಿಸಿದ್ದು ಶಿವಾಜಿನಗರ ಸ್ಥಳೀಯ ಸಂಸ್ಥೆ ಪ್ರಕಟಿಸಲು ಎಲ್ಲಾ ರೀತಿಯ ಸಹಾಯ - ಸಹಕಾರ ನೀಡಿದ್ದಕ್ಕೆ ಹಾಗೂ ಹೆಚ್ಚಿನ ಮುತುವರ್ಜಿ ವಹಿಸಿ ಎರಡು ಪುಸ್ತಕಗಳನ್ನು ಪ್ರಕಟಿಸುವ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿರುವ ಸ್ಥಳೀಯ ಸಂಸ್ಥೆ ಛೇರ್ಮನ್ ಶ್ರೀ ಟಿ.ಎಸ್. ಲೂಕಾಸ್ ಅವರಿಗೆ ಹಾಗೂ ಎಲ್ಲಾ ಪದಾಧಿಕಾರಿಗಳಿಗೆ ನನ್ನ ಹೃತ್ಪೂರ್ವಕ ನಮನಗಳು.

ದಿನಾಂಕ : 19-2-2010 ರಂದು ಶ್ರವಣಬೆಳಗೊಳದಲ್ಲಿ ಹಾಸನ ಜಿಲ್ಲೆ ಸ್ಕೌಟ್-ಗೈಡ್ ಮೇಳದ ಮುಕ್ತಾಯ ಸಮಾರಂಭದಲ್ಲಿ ಭಾಗವಹಿಸಿ ಶ್ರೀ ಕ್ಷೇತ್ರದ ಪರಮಪೂಜ್ಯ ಜಗದ್ಗುರು ಕರ್ಮಯೋಗಿ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿಯವರು ಶ್ರೀ ಜೈನಮಠ, ಶ್ರೀಕ್ಷೇತ್ರ, ಶ್ರವಣಬೆಳಗೊಳ ಅವರ ದಿವ್ಯ ಸಾನ್ನಿಧ್ಯದಲ್ಲಿ ಅತ್ಯಂತ ಯಶಸ್ವಿಯಾಗಿ ಜರುಗಿದ ಸಮಾರಂಭದಲ್ಲಿ ಭಾಗವಹಿಸಿದ ಪರಮಪೂಜ್ಯ ಜಗದ್ಗುರುಗಳಿಗೆ, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಿಗೆ - ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳಿಗೆ, ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರಿಗೆ, ಸ್ಥಳೀಯ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಹಾಗು ಸಮ್ಮೇಳನ ಯಶಸ್ವಿಯಾಗಲು ಸಹಕರಿಸಿದ ಎಲ್ಲರಿಗೂ ನನ್ನ ಅಭಿನಂದನೆಗಳನ್ನು ಹೇಳಿದ್ದೇನೆ.

ದಿನಾಂಕ 22-2-2010 ರಂದು ಶಾಂತಿಗೃಹದಲ್ಲಿ ಜರುಗಿದ ವಿಶ್ವ ಸ್ಕೌಟ್ ದಿನ ಹಾಗೂ ಚಿಂತನಾ ದಿನದಲ್ಲಿ ಭಾಗವಹಿಸಿದ ಯುವಜನ ಸೇವಾ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಐ.ಎಂ. ವಿಠಲಮೂರ್ತಿ, ನಿರ್ದೇಶಕರಾದ ಶ್ರೀ ಶಿವನಂಜಯ್ಯ, ಜಂಟಿ ನಿರ್ದೇಶಕರುಗಳಾದ ಶ್ರೀ ಆರ್.ಎಲ್. ಪಾಟೀಲ್ ಮತ್ತು ಶ್ರೀ ವೈ. ಆರ್. ಕಾಂತರಾಜೇಂದ್ರ ಅವರುಗಳು ಸಭೆಯಲ್ಲಿ ಭಾಗವಹಿಸಿ ಸಂಸ್ಥೆ ಪ್ರಕಟಿಸಿದ ಸ್ಕೌಟ್-ಗೈಡ್ ಚಳವಳಿ ಸಂದೇಶದ ಭಿತ್ತಿ ಪತ್ರವನ್ನು ಬಿಡುಗಡೆಗೊಳಿಸಿ ಶುಭ ಸಂದೇಶ ನೀಡಿದರು. ಅಲ್ಲದೆ. ಶಾಂತಿಗೃಹದಲ್ಲಿ ನಿರ್ಮಾಣ ಹಂತದಲ್ಲಿರುವ ಆಡಿಟೋರಿಯಂ ವೀಕ್ಷಣೆ ಮಾಡಿ ಸೂಕ್ತ ಸಲಹೆ-ಮಾರ್ಗದರ್ಶನ ನೀಡಿದರು. ಚಳವಳಿಯ ಸಂಸ್ಥಾಪಕರು ಜನ್ಮದಿನಾಚರಣೆ ಶುಭಸಂದರ್ಭದಲ್ಲಿ ಅತಿಥಿಗೃಹಕ್ಕೆ ಆಗಮಿಸಿ ಚಳವಳಿಯ ಬೆಳವಣಿಗೆಗೆ ಹಾಗು ತರಬೇತಿ ಕೇಂದ್ರಗಳ ಮೂಲಭೂತ ಕೌಕರ್ಯಗಳ ಅಭಿವೃದ್ಧಿಗೆ ಸರ್ಕಾರದ ಸಂಪೂರ್ಣ ನೆರವು ನೀಡುವುದಾಗಿ ತಿಳಿಸಿದ ಕಾರ್ಯದರ್ಶಿ ಶ್ರೀ ಐ.ಎಂ. ವಿಠಲಮೂರ್ತಿ ಹಾಗೂ ಶ್ರೀ ಶಿವನಂಜಯ್ಯ, ನಿರ್ದೇಶಕರು ಅವರಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು.

ದಿನಾಂಕ 23-2-2010 ರಂದು ವಿಧಾನ ಸೌಧದಲ್ಲಿ ನಾನು, ಶ್ರೀ ಎನ್. ಶ್ರೀನಿವಾಸನ್, ಶ್ರೀ ಎಂ.ಎ. ಚೆಲ್ಲಯ್ಯ, ಶ್ರೀ ಕೆ.ಹೆಚ್. ಜಯರಾಮಯ್ಯ ರವರೊಂದಿಗೆ ಸನ್ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪ ಅವರನ್ನು ಭೇಟಿಮಾಡಿ ಸ್ಕೌಟ್-ಗೈಡ್ ಚಳವಳಿಯ ಪರವಾಗಿ ರೂ. 3 ಲಕ್ಷರೂಗಳ ಚೆಕ್ಕನ್ನು ಸಂತ್ರಸ್ತರ ಪರಿಹಾರ ನಿಧಿಗೆ ಸಲ್ಲಿಸಿದೆವು. ಈಗಾಗಲೇ ರಾಜ್ಯದ ಎಲ್ಲೆಡೆ ದಳಗಳು ಘಟಕಗಳು, ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳು, ಪರಿಹಾರ ನಿಧಿಗಾಗಿ 7 ಲಕ್ಷ ರೂಪಾಯಿಗಳನ್ನು ಸಂಬಂಧಪಟ್ಟ ತಹಸೀಲ್ದಾರ್ ಹಾಗು ಜಿಲ್ಲಾಧಿಕಾರಿಗಳಿಗೆ ನೀಡಿರುವುದಲ್ಲದೆ - ಸ್ಕೌಟ್ ಗೈಡ್ಸ್‌ಗಳು, ರೋವರ್ಸ್ - ರೇಂಜರ್ಸ್‌ಗಳು ಸ್ಥಳೀಯ ಸರ್ಕಾರಿ ಅಧಿಕಾರಿಗಳ ಸಹಕಾರದೊಂದಿಗೆ ನೆರೆಪರಿಹಾರ ಕಾರ್ಯದಲ್ಲಿ ಸಕ್ರಿಯವಾಗಿ ಭಾಗವಹಿಸಿರುವುದನ್ನು ಸನ್ಮಾನ್ಯ ಮುಖ್ಯ ಮಂತ್ರಿಗಳ ಗಮನಕ್ಕೆ ತರಲಾಯಿತು.

ವರ್ಷದ ಕೊನೆಯಲ್ಲಿದ್ದೇವೆ. ನಮ್ಮಗಳ ವಾರ್ಷಿಕ ಯೋಜನೆಗಳನ್ನು ಪೂರೈಸುವ ಹೆಮ್ಮೆ ಮತ್ತು ಆತ್ಮ ವಿಶ್ವಾಸ ನಮ್ಮದಾಗಬೇಕು. ಎಂಬುದು ನನ್ನ ನಮ್ರ ಮನವಿ. ದಯಮಾಡಿ ನಿಮ್ಮಗಳ ವ್ಯಾಪ್ತಿಯ ದಳಗಳನ್ನು - ಘಟಕಗಳನ್ನು ಸ್ಕೌಟ್-ಗೈಡ್ ಕ್ರಿಯಾತ್ಮಕ ಚಟುವಟಿಕೆಗಳನ್ನು ಸಶಕ್ತವಾಗಿ ನಡೆಸುವುದರ ಮೂಲಕ - ನಮಗೆ ನಾವೇ ಮಾರ್ಗದರ್ಶಿಗಳಾಗೋಣ. ಯುವ ಜನಾಂಗಕ್ಕೆ ಸೂಕ್ತ ಹಾಗೂ ಯೋಗ್ಯ ಮಾರ್ಗದರ್ಶನ ಮಾಡುವಲ್ಲಿ ಸಂಸ್ಥಾಪಕ ಲಾರ್ಡ್ ಬೇಡನ್ ಪೋವೆಲ್- ರಾಷ್ಟ್ರಪಿತ ಮಹಾತ್ಮಾಗಾಂಧಿಯವರ ಚಿಂತನೆ ಆದರ್ಶಗಳು ನಮಗೆಲ್ಲಾ ದಾರಿದೀಪವಾಗಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬಿ. ಷಣ್ಮುಖಪ್ಪ

# ರಾಜ್ಯ ವಾರ್ತೆ

## ವಿಶ್ವ ಸ್ಕೌಟ್ ದಿನ ಹಾಗೂ ಚಿಂತನಾ ದಿನ

ದಿನಾಂಕ : 22-2- 2010 ರಂದು ಶಾಂತಿಗೃಹ ಗೈಡ್ ಕಾರ್ಯಾಲಯದಲ್ಲಿ ವಿಶ್ವ ಸ್ಕೌಟ್ ದಿನ ಹಾಗೂ ಚಿಂತನಾ ದಿನ ಆದರಿಸಲಾಯಿತು. ಶ್ರೀ ಶಿವನಂಜಯ್ಯ, ಕೆ.ಎ.ಎಸ್. ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಕರ್ನಾಟಕ ಸರ್ಕಾರ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಚಿಂತನಾ ದಿನವನ್ನು ಉದ್ಘಾಟಿಸಿ ಮಾತನಾಡುತ್ತ ಇಲಾಖೆಯ ವತಿಯಿಂದ ಎಲ್ಲಾ ನೆರವನ್ನು ನೀಡುವುದಾಗಿ ತಿಳಿಸಿದರು. ತಾವು ಒಳ್ಳೆಯ ವ್ಯಕ್ತಿಗಳಾಗಿ ಸಮಾಜ ಸೇವೆ ಮಾಡುವಂತೆ ಮಕ್ಕಳಿಗೆ ಕರೆ ನೀಡಿದರು. ಶ್ರೀ ಆರ್.ಎಲ್. ಪಾಟೀಲ್ ರವರು, ಜಂಟಿ ನಿರ್ದೇಶಕರು ಯುವ ಜನಸೇವಾ ಇಲಾಖೆ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು. ಅತಿಥಿಗಳನ್ನು ಸ್ವಾಗತಿಸಿದರು.

ಧ್ವಜಾರೋಹಣ, ಸರ್ವಧರ್ಮ ಪ್ರಾರ್ಥನೆ, ಸಂಸ್ಥಾಪಕರ ಬಗ್ಗೆ ಸ್ಥಳದಲ್ಲಿಯೇ ಚಿತ್ರ ಬಿಡಿಸುವುದು, ರಸಪ್ರಶ್ನೆ ಬಿ.ಪಿ. ಮತ್ತು ಲೇಡಿ ಬಿ.ಪಿ.ಯವರ ಬಗ್ಗೆ ಭಾಷಣ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ ಶ್ರೀ ಐ.ಎಂ. ವಿಠಲಮೂರ್ತಿ, ಭಾ.ಆ.ಸೇ. ಕಾರ್ಯದರ್ಶಿ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಕರ್ನಾಟಕ ಸರ್ಕಾರ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಸ್ಕೌಟ್/ಗೈಡ್ ಸಂಸ್ಥೆಗೆ ಸಂಬಂಧ ಪಟ್ಟ ಪ್ರಚಾರದ ಭಿತ್ತಿಪತ್ರವನ್ನು ಬಿಡುಗಡೆ ಮಾಡಿ ಬಿ.ಪಿ. ಯವರ ಆದರ್ಶಗಳನ್ನು ಮೈಗೂಡಿಸಿಕೊಳ್ಳುವಂತೆ ಮಕ್ಕಳಿಗೆ ತಿಳಿಸಿದರು. ಶ್ರೀ ಟಿ.ಎಸ್. ಲೂಕಾಸ್, ರಾಜ್ಯ ಆಯುಕ್ತರು (ಸ್ಕೌಟ್ಸ್) ರವರು ಭಾಗವಹಿಸಿ ಮಾತನಾಡಿದರು. ಇದೇ ಸಂದರ್ಭದಲ್ಲಿ ಶ್ರೀ ಕಾಂತರಾಜೇಂದ್ರ, ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರು ಸಹ ಉಪಸ್ಥಿತರಿದ್ದರು.

ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಸರ್ವರನ್ನು ಸ್ವಾಗತಿಸಿ, ಕೊಂಡಜ್ಜಿ ಶಿಬಿರ, ಡಾ. ಅನಿಬೆಸೆಂಟ್ ಪಾರ್ಕ್, ದೊಡ್ಡಬಳ್ಳಾಪುರ, ಶಾಂತಿಗೃಹ ಶಿಬಿರಗಳ ಅಭಿವೃದ್ಧಿಯ ಬಗ್ಗೆ ವಿವರಿಸಿದರು ಮತ್ತು ಹೆಚ್ಚಿನ ಆರ್ಥಿಕ ನೆರವನ್ನು ಸರ್ಕಾರದ ವತಿಯಿಂದ ನೀಡಲು ವಿನಂತಿಸಿದರು. ಬನ್ನಿಸ್, ಕಬ್, ಬುಲ್‌ಬುಲ್, ಸ್ಕೌಟ್ ಮತ್ತು ಗೈಡ್ ಮಕ್ಕಳು ಚಿಂತನಾ ದಿನದ ಬಗ್ಗೆ ತಮ್ಮ ಅನಿಸಿಕೆಯನ್ನು ತಿಳಿಸಿದರು.

ಶ್ರೀ ಟಿ. ಪ್ರಭಾಕರ್, ರಾಜ್ಯ ಕೋಶಾಧಿಕರಿಗಳು, ಸರ್ವರನ್ನು ವಂದಿಸಿದರು. ಬೆಂಗಳೂರು ನಗರದ ವಿವಿಧ ಶಾಲೆಗಳ ಸ್ಕೌಟ್ ಗೈಡ್‌ಗಳಿಂದ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು. ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲೆಗಳ ಬನ್ನಿಗಳು, ಕಬ್‌ಗಳು, ಬುಲ್ ಬುಲ್‌ಗಳು, ಸ್ಕೌಟ್-ಗೈಡ್‌ಗಳು ಹಾಗೂ ದಳನಾಯಕರಗಳು ಒಟ್ಟು 415 ಮಂದಿ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ರಾಜ್ಯ ಪದಾಧಿಕಾರಿಗಳು, ಜಿಲ್ಲಾ ಪದಾಧಿಕಾರಿಗಳು ಹಾಗೂ ಪೋಷಕರು ಸಮಾರಂಭದಲ್ಲಿ ಉಪಸ್ಥಿತರಿದ್ದರು.



# 62nd Himalaya Wood Badge Holders Meet held at Chennai

The 62nd Himalaya Woodbadge Holders Meet was held from 29th Jan. to 2nd Feb 2010 at Corporation Community Hall, Teynampet, Chennai, TamilNadu. 257 Scouters and 91 Guiders from 26 Districts of Karnataka participated in the State Level Event.

Sri N. Rao, Administrative Manager, Exnora International, Chennai inaugurated the meet on 29-1-2010. Sri Chinnaswamy Reddy, Former State Secretary and Scribe welcomed the Guests and the participants. Miss Vasumathi & Miss Sathya spoke about the Community development. In the evening an entertainment programme was held. Mr. Sunil, Mr. Shekar and Mr. Sahil participated.

The following topics were presented and discussed at the meet on 30.1.2010

Sri. T.S. Lucas - State Commissioner (Scouts) – (The Vission of Scouting / Guiding 2013) Smt. Indrani M. State Organising Commissioner (Guide) – Southern Railway, (Influence of Flash Cards in teaching method). Sri Hemanth Kumar Pamerthy, Managing Director, Hand in Hand Micro Finance Ltd. (The Culture & Heritage of Tamilnadu). Sri Narayana Shetty, State Organising Commissioner (Scout) - (Role of Trainers & Support to Leaders) Sri Madhava Singh, State Training Commissioner (Scouts) -(Effective Scouting & Guiding). Sri Chinnaswamy Reddy, conducted the Quiz Programme.

Mr. Raja and his team of visually impaired students presented a Music programme. Sri S. Anbarason, State Organising Commissioner (Scout) Southern Railway spoke about the youth Development & the Role of Adult Leaders in Scouting & Guiding. All Faith prayer Meeting Was held on 31-1- 2010. Shree Abhi Rama Nandaji Swamiji of Sree Rama Krishna Mutt, Mylapure and Rev. Daniel Danapal of Pinophokoftah Church participated.

Sri J. Keshavan, H.R. Consultant, APT Source Corp. Services Ltd. gave a talk on Leadership & presented game on management technique. The quality and growth of the Movement, Role of Counsellors & Badge Instructors, Badge Examiners was discussed. Sri K.P. Kasturi, Director Helping Hand Micro Finance Services inaugurated the Exhibition oragnised by Smt. Hema Vijaya Kumar, Leader Trainer (Cub). She presented Rs. 1000/- to the HWB Meet.

The valedictory function was held on 31-1-2010. Sri V. Carmelus, State Chief Commissioner & Chief Mechanical Engineer Southern Railway was the Chief Guest. Sri T. Balsubramanian, Director APT Sources Corp Services Ltd. presided. A book on Handicrafts written by Smt. Hema Vijaya Kumar was released.

The Grand camp fire was held in the evening and Sri B.S. Vijaya Gopal, Chief Officer (Retd) Reserve Bank of India was the Chief Guest. The participants paid a visit to Pondicherry, Mamallapuram and Chennai on 1st and 2nd Feb 2010





# Congratulations



## *Presentation of Silver World Award to Mr. M.A. Khalid*

Mr. Scott A. Teare, International Director, Boy Scouts of America along with Top Leaders (11 Members) will be visiting India from 11th to 15th March, 2010. During their visit at Bangalore Mr. Scott A. Teare will present the Silver World Award, which is the highest recognition given by the Boy Scouts of America (BSA) to International Scouters, to Mr. M.A. Khalid, State secretary, The Bharat Scouts & Guides, Karnataka and the Chairman APR Award Committee Consultant, APR Scout Committee.



## National Level Desert Trekking Camp held at Rajasthan

National Level Desert Trekking Camp was held from 14th to 18th January 2010 at Jaisalmer, Rajasthan. Mr. Sharath B.N, Mr. Sathya Narayan J. (Rovers) Amoolya K. Ms. Ms. Jyothsna A. Kumar (Rangers) from Mafeking Group, Bangalore South attended the Camp.

They trekked to Som desert, Kanai, Kapa Fort (about 20kms.) Deda, Kuldhara & Tannot. Tannot is a Military Base and very near to the border area.

## National Integration Camp held at Dr. Annie Besant Park



The Bharat Scouts and Guides, National headquarters, Southern Region organised the National Integration Camp for Scouts and guides, from 21st to 25th January 2010 at State Training Centre, Dr. Annie Besent Park, Doddaballapur, Bangalore Rural District. 192 Scouts, Guides and Unit Leaders from Karnataka, Manipur, Rajasthan, Tamilnadu, Kerala, Uttara Pradesh Haryana, Assam, Jammu & Kashmir, Eastern Railway and Central School of Tibet participated in the event. 18 Scouts from Karnataka attended the event. Sri. Mahendra Sharma, Regional Organising Commissioner (Scouts) Southern Region was the leader.

Quiz, Debate, Discussion, State Exposition, Folk Song, Folk Dance, Partriotic Song, Exhibition were the programme of the Event. Each State exhibited their Festivals, Crafts, Culture Food, Marraige, Business Geography, Minerals and Development of Scouting and Guiding of their State.

## National Open Unit Rally held at Varanasi

National open Unit Rally was held from 1st to 5th Feb 2010 at Community Hall Ground, DLW, North Eastern Railway, Varanasi. Smt. Machamma, Asst, Director was the Leader of the Event. 4 Members from Mafeking Scout Group, Bangalore South attended the event from Karnataka. Drawings & Painting Competition, Group Discussion on Swami Vivekananda and the Youth Development, Global Warming were delt with . They visited the Diesel Locomotives Workshop.

Sri L.M. Jain, National Commissioner, addressed the participants.



# Gone Home

## Smt. Ravi Wesley, State Commissioner (Guides)

Smt. Ravi Wesley, State Commissioner(Guides) The Bharat Scouts and Guides, Karnataka Passed away on 30.1.2010 at 7.30 p.m. at Sagar Appolo Hospital, Bangalore at the age of 69 years after a brief illness. She is survived by her Sisters and Relatives.

She served the Movement in Karnataka for over 45 years as Asst. State Organising Commissioner (Guides), Leader Trainer (Guides), State Training Commissioner (G), Headquarters Commissioner (Guides), Joint State Secretary (Guides) and presently as State Commissioner (Guides) since 2008 and involved in the activities of the Movement. She served as Member, National Council, National Executive Committee of Bharat Scouts and Guides India.

She was a Social Worker, Founder of RES Education Society & Former Principal Ravi English School. She was Awarded the Prestigious National Award Bar-to-Silver Star by Dr. A.P.J. Abdul Kalam the then President of India. The Bharat Scouts and Guides, India, New Delhi selected her for the Highest Award Silver Elephant for her Distinguishd and Meritorious Services rendered to the Movement. She has organised, assisted and conducted many Training Camps at State Level, National Level and Inter-National Levels.

A Meeting to condole the sad and untimely Demise of Smt. Ravi Wesley, was held on 18th Feb 2010 at the State Headquarters, Bangalore. Sri Kondajji B. Shanmukhappa State Chief Commissioner, presided over the Meeting. Smt. M.G. Bopaiah, Smt. Saroja V. Naidu Vice-Presidents, Sri T.S. Lucas, State Commissioner (Scouts) Sri M. Neelaiah, President Bharat Scouts and Guides, Bangalore North. Smt.Shashi Murthy, Sister of Smt. Ravi Wesley, Sri I.A Kairanna, Sri. M.M. Londe, Sri R. Venkanna District Chief Commissioners. officials from State Headquarters, District Headquarters and Relatives were present.



# ಜಿಲ್ಲಾ ವಾರ್ತೆ

## ಬಳ್ಳಾರಿ

**ರಾಜ್ಯ ಮಟ್ಟದ ಯುವ ಮೇಳ** : ದಿನಾಂಕ: 3-2-2010 ರಿಂದ 6-2-2010 ರ ವರೆಗೆ ರಾಜ್ಯಮಟ್ಟದ ಯುವ ಮೇಳವು ಪಾಪಯ್ಯ ಹಾಲ್ ಗ್ಲಾಸ್ ಬಜಾರ್, ಬಳ್ಳಾರಿಯಲ್ಲಿ ಜರುಗಿತು. ಶ್ರೀ ಎಂ.ಎಂ. ಲೋಂಡೆ ಲೀಡರ್ ಟ್ರೈನರ್ (ಸ್ಕೌಟ್) ಧಾರವಾಡ ಇವರು ಮೇಳದ ನಾಯಕರಾಗಿದ್ದು ಸ್ಕೌಟ್ಸ್/ಗೈಡ್ಸ್/ ಎನ್.ಸಿ.ಸಿ. / ಸೇವಾದಳ / ರೋವರ್ಸ್, / ಸ್ಕೌಟರ್ಸ್ / ಗೈಡರ್ಸ್ ಒಟ್ಟು 427 ಮಕ್ಕಳು ಭಾವಹಿಸಿದ್ದರು.

**ಉದ್ಘಾಟನೆ** : ದಿನಾಂಕ : 3-2-2010 ರಂದು ಡಾ. ಹೆಚ್ ಬಾಲರಾಜ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಉಪಾಧ್ಯಕ್ಷರು ಜಿಲ್ಲಾ ಸಂಸ್ಥೆ ಇವರು ಅಧ್ಯಕ್ಷತೆ ವಹಿಸಿ ಮೇಳವನ್ನು ಉದ್ಘಾಟಿಸಿದರು. ಶ್ರೀ ಲಕ್ಷ್ಮಣ್ ಸೀನಿಯರ್ ಮ್ಯಾನೇಜರ್ ಎನ್.ಎಂ.ಡಿ.ಸಿ., ದೋಣಿಮಲೈ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ "ಚೈತನ್ಯ ಸಿಂದು" ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಿದರು. ಶ್ರೀ ಆರ್. ವೆಂಕಣ್ಣ, ಜಿಲ್ಲಾ ಮುಖ್ಯ ಆಯುಕ್ತರು ಯುವ ಮೇಳದ ಬಗ್ಗೆ ಪ್ರಾಸ್ತಾವಿಕ ನುಡಿ ನುಡಿದರು. ಅಧ್ಯಕ್ಷರು ಮಾತನಾಡುತ್ತಾ ರಾಷ್ಟ್ರಾಭಿವೃದ್ಧಿಗೆ ಯುವಕರ ಪಾತ್ರ ಬಹಳ ಮುಖ್ಯವಾದದ್ದು ಮಕ್ಕಳಲ್ಲಿ ಶಿಸ್ತು, ಸಂಯಮ, ಸೇವಾ ಮನೋಭಾವನೆ, ಗುರು ಹಿರಿಯರಲ್ಲಿ ಭಕ್ತಿ ಬೆಳಸುವಲ್ಲಿ ಸ್ಕೌಟ್ / ಗೈಡ್ ಸಂಸ್ಥೆ ಶ್ರಮಿಸುತ್ತಿದೆ. ಎಲ್ಲ ಶಾಲೆಗಳಲ್ಲೂ ಘಟಕಗಳನ್ನು ಪ್ರಾರಂಭಿಸಲು ಪೂರ್ಣ ಸಹಕಾರ ನೀಡುವುದಾಗಿ ತಿಳಿಸಿದರು.

**ಪಥಸಂಚಲನೆ** : ದಿನಾಂಕ 4-2-2010 ಶ್ರೀ ಎನ್. ಶ್ರೀನಿವಾಸನ್, ಜಂಟಿ ರಾಜ್ಯ ಕಾರ್ಯದರ್ಶಿಯವರು ಪಥಸಂಚಲನೆಯನ್ನು ಉದ್ಘಾಟಿಸಿದರು. ನಂತರ ನಡೆದ ಶ್ರೀಮತಿ ಎಸ್. ಲಲಿತಮ್ಮ ಜಂಟಿ ನಿರ್ದೇಶಕರು ಯುವ ಜನ ಸೇವಾ ಮತ್ತು ಕ್ರೀಡಾ ಇಲಾಖೆ ಕರ್ನಾಟಕ ಸರ್ಕಾರ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಸಮುದಾಯ ಅಭಿವೃದ್ಧಿಯಲ್ಲಿ ಯುವಕರ ಪಾತ್ರ ಬಹಳ ಮುಖ್ಯವಾದದ್ದು. ಸ್ವಾಮಿ ವಿವೇಕಾನಂದರ ಆದರ್ಶಗಳನ್ನು ನಿಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಎಲ್ಲಾ ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಯುವಕರು ಭಾಗವಹಿಸಬೇಕೆಂದು ನುಡಿದರು. ಶ್ರೀ ಕುಮಾರ ಸ್ವಾಮಿ ಲೆಕ್ಕಾಧಿಕಾರಿಗಳು. ಯುವಜನಸೇವಾ ಇಲಾಖೆ ಸಹ ಉಪಸ್ಥಿತರಿದ್ದರು. ನಂತರ ಶ್ರೀ ಎನ್. ಶ್ರೀನಿವಾಸನ್ ರವರು ಸಮುದಾಯ ಅಭಿವೃದ್ಧಿಯಲ್ಲಿ ಯುವಕರ ಪಾತ್ರ ಈ ವಿಷಯವಾಗಿ, ಪ್ರಮುಖ ಉಪನ್ಯಾಸ ನೀಡಿ ಇದರ ಬಗ್ಗೆ ಮಾತನಾಡಲು ಪಾಲ್ಗೊಂಡ ಯುವಕ ಯುವತಿಯರಿಗೆ ಆಹ್ವಾನ ನೀಡಿದರು. ಅದರಂತೆ ಸ್ವ ಇಚ್ಛೆಯಿಂದ 20ಕ್ಕೂ ಹೆಚ್ಚು ಯುವಕ ಯುವತಿಯರು ಈ ವಿಷಯದ ಬಗ್ಗೆ ಮಾತನಾಡಿದರು. ಅಂದು ಸಂಜೆ

ಗೃಹರಕ್ಷಕ ದಳದವರಿಂದ ಅಗ್ನಿ ಅಪಘಾತ ಮತ್ತು ರಕ್ಷಣೆ ಬಗ್ಗೆ ಪ್ರಾತ್ಯಕ್ಷಿಕೆ ಜರುಗಿತು. ರಾತ್ರಿ. 8 ಗಂಟೆಗೆ ಮಕ್ಕಳಿಂದ ಜಾನಪದ ನೃತ್ಯ ಕಾರ್ಯಕ್ರಮ ಏರ್ಪಡಿಸಲಾಗಿತ್ತು.

ದಿನಾಂಕ 5-2-2010 ರಂದು 'ರಾಷ್ಟ್ರ ನಿರ್ಮಾಣದಲ್ಲಿ ಯುವಕರ ಪಾತ್ರ' ಈ ವಿಷಯವಾಗಿ ಶ್ರೀ ಎಂ.ಎ. ಚೆಲ್ಲಯ್ಯ ಕೇಂದ್ರ ಸ್ಥಾನಿಕ ಆಯುಕ್ತರು ಪ್ರಮುಖ ಉಪನ್ಯಾಸ ನೀಡಿ. ಇದರ ಬಗ್ಗೆ ಗುಂಪು ಚರ್ಚೆ ನಡೆಸಿದರು. ಆಶು ಭಾಷಣ ಹಾಗೂ ರಸಪ್ರಶ್ನೆ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು.

**ಭವ್ಯ ಶಿಬಿರಾಗ್ನಿ** : ರಾತ್ರಿ 7.30ಕ್ಕೆ ಶ್ರೀ ವಿ.ವಿ. ಕೆಂಪರಂಗಯ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳು ಮುಖ್ಯ ಅತಿಥಿಗಳಾಗಿ ಆಗಮಿಸಿ ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ಉದ್ಘಾಟಿಸಿದರು.



**ಸರ್ವಧರ್ಮ ಪ್ರಾರ್ಥನೆ ಹಾಗೂ ಸಮಾರೋಪ ಸಮಾರಂಭ** : ದಿನಾಂಕ 6-2-2010 ರಂದು ಬೆಳಗ್ಗೆ 7-00 ಗಂಟೆಗೆ ಸರ್ವಧರ್ಮ ಪ್ರಾರ್ಥನೆ ಏರ್ಪಡಿಸಿದ್ದು ರೆ. ಫಾದರ್ ಸ್ಯಾಮ್ಯುಯಲ್ ಪ್ರಸಾದ್ ಗುರುಗಳು ಮುಖ್ಯ ಅತಿಥಿಗಳಾಗಿ ಆಗಮಿಸಿ ಮಕ್ಕಳಿಗೆ ಆಶೀರ್ವದಿಸಿದರು. 9-00 ಗಂಟೆಗೆ ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ವಹಿಸಿದ್ದು ಶ್ರೀ ರುದ್ರಗೌಡ್ ಅಧ್ಯಕ್ಷರು. ಜಿಲ್ಲಾ ಪಂಚಾಯತ್, ಬಳ್ಳಾರಿ, ಡಾ|| ಬಿ. ದೇವಾನಂದ್, ನಿರ್ದೇಶಕರು. ವಿಜಯನಗರ ವೈದ್ಯಕೀಯ ಮಹಾ ವಿದ್ಯಾಲಯ, ಬಳ್ಳಾರಿ ಇವರುಗಳು ಮುಖ್ಯ ಅತಿಥಿಗಳಾಗಿ ಆಗಮಿಸಿ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಎಲ್ಲಾ ರೀತಿಯ ಪ್ರೋತ್ಸಾಹ ನೀಡುವುದಾಗಿ ತಿಳಿಸಿ ಮಕ್ಕಳಿಗೆ ಪ್ರಮಾಣ ಪತ್ರ ಹಾಗೂ ನೆನಪಿನ ಕಾಣಿಕೆ ವಿತರಿಸಿದರು.

ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ನಾರಾಯಣ ಶೆಟ್ಟಿ ಹಾಗೂ ಶ್ರೀಮತಿ ಜಾನಕಿ ವೇಣುಗೋಪಾಲ್ ಹಾಗೂ ಜಿಲ್ಲೆಯ ಸ್ಕೌಟರ್ಸ್ / ಗೈಡರ್ಸ್ ಜಿಲ್ಲಾ ಸಂಘಟಕರಾದ ಶ್ರೀ ಮಹಮದ್ ಪಾಷ ಇವರೆಲ್ಲರೂ ಮೇಳದ ಯಶಸ್ಸಿಗೆ ಸಹಕಾರ ನೀಡಿದರು.





ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಲಿಂಗದಹಳ್ಳಿ (ಸಂಡೂರು ತಾಲ್ಲೂಕು) ಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಘಟಕ ವನ್ನು ದಿನಾಂಕ 22 ಜನವರಿ -2010 ರಂದು ಧ್ವಜಾರೋಹಣ ಕಾರ್ಯಕ್ರಮದ ಮೂಲಕ ಪ್ರಾರಂಭಿಸಲಾಯಿತು. ಸ್ಕೌಟ್ಸ್ ಮಾಸ್ಟರ್ ಎನ್. ಓಬಳೇಶ ಕಾರ್ಯಕ್ರಮಕ್ಕೆ ಎಲ್ಲಾ ಅತಿಥಿಗಳನ್ನು ಸ್ವಾಗತಿಸಿದರು ಮತ್ತು ಉದ್ಘಾಟನೆಯನ್ನು ಶ್ರೀ ಆರ್. ವೆಂಕಣ್ಣ ಜಿ. ಮು. ಆಯುಕ್ತರು ಇವರು ಮಾಡಿದರು. ಡಾ|| ಕೆ. ವೀರೇಶ, ಜಿಲ್ಲಾ ಆಯುಕ್ತರು ಇವರು ಸ್ಕೌಟಿನ ಪ್ರಾಮುಖ್ಯತೆಯನ್ನು ಮಕ್ಕಳಿಗೆ ತಿಳಿಸಿದರು. ಕಾರ್ಯಕ್ರಮದಲ್ಲಿ ಪ್ರಾಚಾರ್ಯ ಡಿ.ಎಸ್. ಕೃಷ್ಣಮೂರ್ತಿ, ಕ್ಷೇತ್ರ ಶಿಕ್ಷಣಾಧಿಕಾರಿ ಎಂ. ಮಂಜುನಾಥ್, ಹಾಜರಿದ್ದು, ಪ್ರತಿಯೊಂದು ಶಾಲೆಯಲ್ಲಿ ಸ್ಕೌಟ್ಸ್ ಘಟಕ ಪ್ರಾರಂಭಿಸಿ ಉತ್ತಮ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳಾಗಲು ತಿಳಿಸಿದರು.



ಸಂಡೂರು ತಾಲೂಕು ಕುರೆತುಪ್ಪ ಗ್ರಾಮದಲ್ಲಿ ಇಂದಿರಾಗಾಂಧಿ ಗೈಡ್‌ದಳ ಪ್ರಾರಂಭೋತ್ಸವವನ್ನು ಮಾನ್ಯಶ್ರೀ ಗೌರಿಶಂಕರ್, ಅಧ್ಯಕ್ಷರು ಶಾಲಾ ಅಭಿವೃದ್ಧಿ ಸಮಿತಿ ಕುರೆತುಪ್ಪ ಇವರು ಮಾಡಿ ಮಕ್ಕಳಲ್ಲಿ ಮಾನವೀಯ ಮೌಲ್ಯಗಳು, ಸೇವಾಪ್ರವೃತ್ತಿ ಬೆಳೆಯಲು ಇಂತಹ ಸಂಸ್ಥೆಗಳಲ್ಲಿ ಮಕ್ಕಳನ್ನು ಸೇರಿಸುವುದು ಅತ್ಯವಶ್ಯಕವೆಂದು ತಿಳಿಸಿದರು. ಇವರ ಸಂಗಡ ಇತರ ಎಲ್ಲಾ ಸದಸ್ಯರು ಭಾಗವಹಿಸಿ ಸಮಾರಂಭಕ್ಕೆ ಶುಭ ಕೋರಿದರು ಶ್ರೀ ಸೋಮಪ್ಪ ಕಾರ್ಯದರ್ಶಿ ತಾಲೂಕ ಸಂಸ್ಥೆ ಸಂಡೂರು ಶ್ರೀಮತಿ ಜಯಶ್ರೀ ಜೋಶಿ ಎ.ಎಲ್.ಟಿ. (ಗೈ) ಟಿ.ಬಿ. ಡ್ಯಾಂ ಮಾರ್ಗದರ್ಶಿಗಳಾಗಿ ಭಾಗವಹಿಸಿದ್ದರು. ನಂತರ ಬಿ.ಪಿ. ಅವರ ಜೀವನ ಚರಿತ್ರೆಯ ಬಗೆ ಜಯಶ್ರೀ ಜೋಷಿ ಮಾತನಾಡಿದರು.

ಬಳ್ಳಾರಿ ತಾಲೂಕ ಮಟ್ಟದ ಒಂದು ದಿನದ ಮೇಳವನ್ನು ದಿನಾಂಕ 22-2-2010 ರಂದು ಸ್ಕೌಟ್ಸ್ ಗೈಡ್ಸ್ ಭವನ ಬಳ್ಳಾರಿಯಲ್ಲಿ ಆಯೋಜಿಸಲಾಗಿತ್ತು. ಮೇಳದಲ್ಲಿ 500 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದು ಅನೇಕ ಚಟುವಟಿಕೆಗಳಲ್ಲಿ ಭಾಗವಹಿಸಿದ್ದರು. ಪಥ ಸಂಚಲನ, ಚಿತ್ರಕಲೆ, ಮಾದರಿ ತಯಾರಿಕೆ, ಕ್ವಿಜ್ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು. ಸಾಯಂಕಾಲ ಬಿ.ಪಿ. ಅವರ ಆದರ್ಶಗಳು, ಅವರು ನಡೆದು ಬಂದ ಹಾದಿ ಬಗ್ಗೆ ಮಕ್ಕಳಿಂದ ಭಾಷಣ ಏರ್ಪಡಿಸಲಾಗಿತ್ತು. ಸಮಾರೋಪ ಸಮಾರಂಭದಲ್ಲಿ ಮಾನ್ಯ ಶ್ರೀ ರುದ್ರಸ್ವಾಮಿ ಕಾರ್ಯನಿರ್ವಾಹಕ ಅಧಿಕಾರಿಗಳು ಬಳ್ಳಾರಿ ತಾಲೂಕ ಪಂಚಾಯತ್, ಶ್ರೀ ಚಂದ್ರಶೇಖರ್ ಅಧ್ಯಕ್ಷರು ಸರಕಾರಿ ನೌಕರರ ಸಂಘ ಬಳ್ಳಾರಿ ಶ್ರೀ ವಿ. ಪ್ರಭಾಕರ್ ಖಜಾಂಚಿ ಜಿಲ್ಲಾ ಸಂಸ್ಥೆ ಬಳ್ಳಾರಿ ಭಾಗವಹಿಸಿದ್ದರು. ಶ್ರೀ ವಿ. ದಕ್ಷಿಣಾಮೂರ್ತಿ, ಕಾರ್ಯದರ್ಶಿ ಹಾಗೂ ಎಮ್.ಟಿ. ಮಲ್ಲೇಶ್ ಸಹಾಯಕ ಆಯುಕ್ತರು ಶ್ರೀ ವೆಂಕಟೇಶ್ ಖಜಾಂಚಿ ಮತ್ತು ತಾಲೂಕ ಎಲ್ಲಾ ಸ್ಕೌಟರ್ಸ್‌ಗಳ ಮತ್ತು ಗೈಡರ್ಸ್‌ಗಳ ಸಹಾಯ ಸಹಕಾರದಿಂದ ಮೇಳ ಯಶಸ್ವಿಯಾಯಿತು.

ದಿನಾಂಕ 22-2-2010 ರಂದು ಕೊಟ್ಟೂರು ಪಟ್ಟಣದಲ್ಲಿ ಕೂಡ್ಲಿಗಿ ತಾಲೂಕ ಮಟ್ಟದ ಸ್ಕೌಟ್ಸ್ ಗೈಡ್ಸ್ ಮೇಳವನ್ನು ಹಮ್ಮಿಕೊಳ್ಳಲಾಗಿತ್ತು. ಮೇಳದಲ್ಲಿ 210 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀ ಮೈಲೇಶ್ ಜೀವೂರ್, ಸಮನ್ವಯ ಅಧಿಕಾರಿಗಳು ಬಿ.ಆರ್.ಸಿ. ಕೊಟ್ಟೂರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಮಕ್ಕಳು ಬಿ.ಪಿ. ಯವರ ಆದರ್ಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಉತ್ತಮ ನಾಗರಿಕರಾಗಿ ದೇಶ ಸೇವೆ ಮಾಡಲು ಸಿದ್ಧರಾಗಬೇಕೆಂದು ಕರೆಯಿತ್ತರು. ಪಟ್ಟಣದ ಮುಖ್ಯ ಬೀದಿಗಳಲ್ಲಿ ಪಥಸಂಚಲನ ನಡೆಸಿದ ನಂತರ ಚಿತ್ರಕಲೆ, ಮಾದರಿ ತಯಾರಿಕೆ, ರಂಗೋಲಿ, ಮೆಹಂದಿ, ಕ್ವಿಜ್ ಮೊದಲಾದ ಚಟುವಟಿಕೆಗಳಲ್ಲಿ ಮಕ್ಕಳು ಭಾಗವಹಿಸಿದರು. ಸಾಯಂಕಾಲ ಮನರಂಜನಾ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಮಾನ್ಯಶ್ರೀ ಬಿ.ಎಸ್. ವೀರಭದ್ರಪ್ಪ ಮಾಜಿ. ಶಾಸಕರು ಸಮಾರೋಪ ಸಮಾರಂಭದಲ್ಲಿ ಭಾಗವಹಿಸಿ ಮಕ್ಕಳು ತಮ್ಮ ಜೀವನದಲ್ಲಿ ಶಿಸ್ತನ್ನು ಬೆಳಸಿಕೊಂಡು ಉತ್ತಮ ನಾಗರಿಕರಾಗಲು ಕರೆಯಿತ್ತರು. ಮಾನ್ಯಶ್ರೀ ನಾಗೇಶ್ ಪಿ. ಅಧ್ಯಕ್ಷರು, ಕೂಡ್ಲಿಗಿ ತಾಲೂಕು ಪ್ರಾಥಮಿಕ ಉಪಾಧ್ಯಾಯರ ಸಂಘ, ಕೂಡ್ಲಿಗಿ ಇವರು ಸಹ ಭಾಗವಹಿಸಿದ್ದರು.

## ಬೆಳಗಾವಿ

26 ಜನವರಿ 2010 ರಂದು ಗಣರಾಜ್ಯ ದಿನಾಚರಣೆಯನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಭವನ ರಾಮರಸ್ತೆ, ಬೆಳಕವಾಡಿ, ಬೆಳಗಾವಿ ಇಲ್ಲಿ ಆಚರಿಸಲಾಯಿತು. ಶ್ರೀ ಟಿ.ಡಿ. ಕಾಂಬೋಜಿ ಜಿಲ್ಲಾ ಕಾರ್ಯದರ್ಶಿ ಇವರು ಧ್ವಜಾರೋಹಣ ಮಾಡಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನು ಉದ್ದೇಶಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ಶ್ರೀ ನದಾಫ, ಸ.ಹಿ.ಪ್ರಾ. ಶಾಲೆ. ನಂ- 20 ಬೆಳಕವಾಡಿ, ಬೆಳಗಾವಿ ನಗರ, ಶ್ರೀ ನಾಗೇಶ ಆರ್. ಶಿವಪೂರ, ಎ.ಎಸ್.ಓ.ಸಿ, ಬೆಳಗಾವಿ, ಶ್ರೀ ಮಂಜುನಾಥಕಾಂಬೋಜಿ ಜಿಲ್ಲಾ ಸಂಘಟಕರು, ಬೆಳಗಾವಿ ಹಾಗೂ ಶಾಲಾ ಮಕ್ಕಳು ಉಪಸ್ಥಿತರಿದ್ದರು. ನೆಹರೂ ಕ್ರೀಡಾಂಗಣ, ಬೆಳಗಾವಿ ನಗರ ಇಲ್ಲಿ ಜಿಲ್ಲಾ ಆಡಳಿತವತಿಯಿಂದ ಗಣರಾಜ್ಯೋತ್ಸವ ದಿನಾಚರಣೆ ಅಂಗವಾಗಿ ನಡೆದ ಪಥಸಂಚಲನ ಸನ್ಮಾನ್ಯ ಶ್ರೀ ಬಸವರಾಜ ಬೊಮ್ಮಾಯಿ, ಜಿಲ್ಲಾ ಉಸ್ತುವಾರಿ ಸಚಿವರು ಬೆಳಗಾವಿ ಜಿಲ್ಲೆ ಇವರ ಸಮ್ಮುಖದಲ್ಲಿ ನಡೆಯಿತು.

ಮಹಿಳಾ ವಿದ್ಯಾಲಯ ಬಾಲಕಿಯರ ಗೈಡ್ ತಂಡ ಪಥಸಂಚಲನದಲ್ಲಿ ಪ್ರಥಮ ಬಹುಮಾನ ಪಡೆಯಿತು. ಸೆಂಟ್ ಜೋಸೆಫ್ ಗೈಡ್ಸ್ ತಂಡ, ಬಿ.ಕೆ. ಮಾಡೆಲ್ ಸ್ಕೌಟ್ ತಂಡ, ಸಿದ್ರಾಮೇಶ್ವರ ಸ್ಕೌಟ್ ತಂಡಗಳು ಪಥಸಂಚಲನದಲ್ಲಿ ಭಾಗವಹಿಸಿದ್ದವು.

ಈ ಸಂದರ್ಭದಲ್ಲಿ ಮಾನ್ಯ ಸಚಿವರು, ರಾಷ್ಟ್ರಪತಿ ಪುರಸ್ಕಾರ ಪಡೆದ ಗೈಡ್. ಕುಮಾರಿ ಅಕ್ಷತಾ ವಿ. ಬೇವಿನಕಟ್ಟಿ, ಎಸ್.ಎಫ್.ಎಸ್. ಪ್ರೌಢಶಾಲೆ- ಸುರೆಬಾನ ತಾ|| ರಾಮದುರ್ಗ ಇವರಿಗೆ ಹಾಗೂ ಶ್ರೀ ನಾಗೇಶ ಆರ್. ಶಿವಾಪೂರ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು, ಮಲೇಸಿಯಾದ ಕೌಲಾಲಂಪುರದಲ್ಲಿ ಎಲ್.ಟಿ. ತರಬೇತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿಕೊಂಡು ಬಂದದ್ದಕ್ಕಾಗಿ ಸನ್ಮಾನಿಸಿದರು. ಸನ್ಮಾನ್ಯಶ್ರೀ ಸುರೇಶ ಅಂಗಡಿ, ಸಂಸದರು, ಬೆಳಗಾವಿ ಸನ್ಮಾನ್ಯಶ್ರೀ ಫಿರೋಜ ಶೇಡ, ಶಾಸಕರು, ಬೆಳಗಾವಿ ಉತ್ತರ, ಸನ್ಮಾನ್ಯ ಶ್ರೀ ಸಂಜಯ ಪಾಟೀಲ, ಶಾಸಕರು ಬೆಳಗಾವಿ ಗ್ರಾಮೀಣ, ಸನ್ಮಾನ್ಯ ಶ್ರೀಮತಿ ಅಶ್ವಿನೀ ಪಾಟೀಲ, ಅಧ್ಯಕ್ಷರು. ಜಿ. ಪಂ. ಸನ್ಮಾನ್ಯ ಶ್ರೀ ಯಲ್ಲಪ್ಪ ಕುರಬರ್ ಮಹಾಪೌರ, ಮಹಾನಗರ ಪಾಲಿಕೆ, ಬೆಳಗಾವಿ ನಗರ, ಡಾ|| ರವಿಶಂಕರ, ಜಿಲ್ಲಾಧಿಕಾರಿಗಳು, ಬೆಳಗಾವಿ, ಶ್ರೀಮತಿ ಸೋನಿಯಾ ನಾರಂಗ್ ಆರಕ್ಷಾಧೀಕ್ಷಕರು, ಬೆಳಗಾವಿ ಸನ್ಮಾನ್ಯ ಶ್ರೀಮತಿ ಏತ್ ರೂಪಕೌರ್, ಮುಖ್ಯ ಕಾರ್ಯನಿರ್ವಾಹಕರ ಅಧಿಕಾರಿಗಳು ಜಿ. ಪಂ. ಬೆಳಗಾವಿ ಇವರು ಹಾಗೂ ಗಣ್ಯರು, ಮಾನ್ಯರು ಉಪಸ್ಥಿತರಿದ್ದರು.




ಸುಕ್ಷೇತ್ರ ಶ್ರೀ ಫಲಾಹಾರೇಶ್ವರ ಜಾತ್ರೆಯಲ್ಲಿ ರಾಮದುರ್ಗಾ ತಾಲ್ಲೂಕಿನ ಸುರೇಬಾನ ಎಸ್.ಎಫ್.ಎಸ್. ಪ್ರೌಢಶಾಲೆಯ ಸ್ಕೌಟ್ಸ್‌ಗಳು ಸೇವೆಸಲ್ಲಿಸಿದ್ದು ಈ ಸಂದರ್ಭದಲ್ಲಿ ಮಠದ ಸ್ವಾಮೀಜಿಯವರು ಸ್ಕೌಟ್ ಮಾಸ್ಟರ್ ಶ್ರೀ ವೈ.ವಿ. ಗೊರವನ ಕೊಳ್ಳರವರಿಗೆ ಸನ್ಮಾನಿಸಿದರು.

ಜಿಲ್ಲಾ ಶಿಕ್ಷಣ ತರಬೇತಿ ಸಂಸ್ಥೆ (ಡಯಟ್) ಬೆಳಗಾವಿ, ಮಣ್ಣೂರ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿ ಇವರ ಸಂಯುಕ್ತಾಶ್ರಯದಲ್ಲಿ ದಿನಾಂಕ: 29-12-2009 ರಿಂದ 04-01-2010 ರ ವರೆಗೆ ಶ್ರೀಮುರಘೇಂದ್ರ ವಸತಿ ಶಾಲೆ, ಕುಪ್ಪನವಾಡಿ ತಾಲ್ಲೂಕ ಚಿಕ್ಕೋಡಿ. ಇಲ್ಲಿ ಜಿಲ್ಲೆಯ ಶಿಕ್ಷಕರಿಗೆ ಮೂಲ ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್ ತರಬೇತಿ ಶಿಬಿರವನ್ನು ಯಶಸ್ವಿಯಾಗಿ ನಡೆಸಲಾಯಿತು. 37 ಶಿಕ್ಷಕರಿಂದ ಕೂಡಿದ ಸ್ಕೌಟ್ ಮಾಸ್ಟರ್ ತರಬೇತಿ ಶಿಬಿರದ ನಾಯಕರಾಗಿ ಶ್ರೀ ನಾಗೇಶ ಆರ್. ಶಿವಪೂರ, ಎ.ಎಲ್.ಟಿ. (ಸ್ಕೌಟ್) ಬೆಳಗಾವಿ, 21 ಶಿಕ್ಷಕಿಯರಿಂದ ಕೂಡಿದ ಗೈಡ್ ಕ್ಯಾಪ್ಟನ್ ತರಬೇತಿ ಶಿಬಿರದ ನಾಯಕಿಯರಾಗಿ ಶ್ರೀಮತಿ ಎಲ್.ಎಸ್. ಮಂಗಿ, ಎ.ಎಲ್.ಟಿ.(ಗೈ.) ಗೋಕಾಕ ಇವರು ಕಾರ್ಯ ನಿರ್ವಹಿಸಿದರು.

ದಿನಾಂಕ 29-12-2009 ರಂದು ಸನ್ಮಾನ್ಯ ಶ್ರೀ ಬಿ.ಜಿ. ನಾಯಕ, ಉಪನಿರ್ದೇಶಕರು (ಅಭಿವೃದ್ಧಿ) ಜಿಲ್ಲಾ ಶಿಕ್ಷಣ ತರಬೇತಿ ಸಂಸ್ಥೆ, ಬೆಳಗಾವಿ ಇವರು ಉದ್ಘಾಟನೆಯನ್ನು ಜ್ಯೋತಿ ಬೆಳಗುವದರೊಂದಿಗೆ ನೆರವೇರಿಸಿದರು. ಈ ಸಂದರ್ಭದಲ್ಲಿ ಶ್ರೀ ಬಿ.ಜಿ. ಮಾಳಗಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಚಿಕ್ಕೋಡಿ, ಶ್ರೀ ಜಿ.ಎಂ. ಮುಂದಿನ ಮನಿ, ನೋಡೆಲ್ ಅಧಿಕಾರಿ ಡಯಟ್, ಬೆಳಗಾವಿ ಮಣ್ಣೂರ, ಶ್ರೀಧರಗೌಡ್ರು, ಚೇರ್ಮನ್ ಶ್ರೀ ಮುರಘೇಂದ್ರ ವಸತಿ ಶಾಲೆ ಕುಪ್ಪನವಾಡಿ ಇವರುಗಳು ಉಪಸ್ಥಿತರಿದ್ದರು. ದಿನಾಂಕ 4-1-2010 ಶಿಬಿರದ ಸಮಾರೋಪ ಸಮಾರಂಭವು ಸನ್ಮಾನ್ಯ ಶ್ರೀ ಬಿ.ಸಿ. ಬಸವರಾಜಪ್ಪ, ಕೆ.ಇ.ಎಸ್., ಉಪನಿರ್ದೇಶಕರು, (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ ಇವರ ಅಧ್ಯಕ್ಷತೆಯಲ್ಲಿ ಜರುಗಿತು.

ದಿನಾಂಕ 15-01-2010 ರಂದು ಕಾಗವಾಡದಲ್ಲಿ ಹಿರಿಯ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಮುಖ್ಯೋಪಾಧ್ಯಾಯರುಗಳ ಸಭೆ ಸನ್ಮಾನ್ಯ ಶ್ರೀ ಬಿ.ಸಿ. ಬಸವರಾಜಪ್ಪ, ಕೆ.ಇ.ಎಸ್., ಉಪನಿರ್ದೇಶಕ (ಆಡಳಿತ) ಸಾ.ಶಿ. ಇಲಾಖೆ, ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆ ಇವರ ನೇತೃತ್ವದಲ್ಲಿ ನಡೆಯಿತು. ಈ ಸಂದರ್ಭದಲ್ಲಿ ನಾಗೇಶ, ಆರ್. ಶಿವಪೂರ, ಎ.ಎಲ್.ಟಿ. (ಸ್ಕೌಟ್) ಎ.ಎಸ್.ಓ.ಸಿ., ಬೆಳಗಾವಿ ಇವರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣದ ಮಾಹಿತಿ ನೀಡಿದರು. ಶ್ರೀ ವಿ.ಜಿ. ಪೋಳ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕಾಗವಾಡ ಹಾಗೂ ದೈಹಿಕ ಶಿಕ್ಷಣ ವಿಷಯ ಪರೀಕ್ಷಕರು ಶಿಕ್ಷಣ ಸಂಯೋಜಕರು ಕಾಗವಾಡ ಉಪಸ್ಥಿತರಿದ್ದರು.

## ಬಾಗಲಕೋಟೆ

ದಿನಾಂಕ 26-01-2010 ರಂದು ಗಣರಾಜ್ಯೋತ್ಸವವನ್ನು ವಿಜೃಂಭಣೆಯಿಂದ ಜಿಲ್ಲಾ ಸಂಸ್ಥೆಯಲ್ಲಿ ಆಚರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಜಿ.ಎನ್. ಪಾಟೀಲ ರವರು ವಹಿಸಿ ಧ್ವಜಾರೋಹಣವನ್ನು ನೆರವೇರಿಸಿದರು. ಜಿಲ್ಲಾ ಆಯುಕ್ತರಾದ ಶ್ರೀ ಜಿ.ಬಿ. ಇದ್ದಲಗಿ ರವರು ಸ್ವಾಗತವನ್ನು ಕೋರಿದರು ಹಾಗು ನಿರೂಪಣೆಯನ್ನು ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಎಂ.ಎಂ. ಹಳ್ಳೂರ ಮಾಡಿದರು. ವಂದನಾರ್ಪಣೆಯನ್ನು ಜಿಲ್ಲಾ ಕಾರ್ಯದರ್ಶಿ ಶ್ರೀ ಸಿ.ಎ. ಸಾವಳಗಿ ಮಾಡಿದರು.

### ಸ್ವಾಮಿ ವಿವೇಕಾನಂದರ ಜಯಂತಿ ಆಚರಣೆ

ಶ್ರೀ ದಿಂಗಬರೇಶ್ವರ ಸ್ಕೌಟ್ ಟ್ರೂಪ್, ನಾಗರಾಳ ಮತ್ತು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ನಾಗರಾಳ, ಇವರ ಸಂಯುಕ್ತ ಆಶ್ರಯದಲ್ಲಿ ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜಯಂತಿ ಆಚರಿಸಲಾಯಿತು. ಕಾರ್ಯಕ್ರಮದ ದಿವ್ಯ ಸಾನಿಧ್ಯವನ್ನು ಪೂಜ್ಯ ಶ್ರೀ ಶೇಷಯ್ಯ ಮಹಾಸ್ವಾಮಿಗಳು, ದಿಗಂಬರೇಶ್ವರ ಮಠ, ನಾಗರಾಳ, ಅವರು ವಹಿಸಿದ್ದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಭಾವೈಕ್ಯತೆ ಬೆಳೆಸುವ ಜಗತ್ತಿನ ಏಕೈಕ ಸಂಸ್ಥೆ ಇದಾಗಿದೆ ಎಂದರು. ಮುಖ್ಯ ಅತಿಥಿಗಳಾಗಿ. ಎಸ್.ಡಿ.ಎಂ.ಸಿ., ಅಧ್ಯಕ್ಷರಾದ ದಶರಥ ಕೊಪ್ಪಳ ಹನಮಂತ ಸುಳಕೇರಿ ಆಗಮಿಸಿದ್ದರು. 32 ಮಕ್ಕಳಿಂದ ಶ್ರಮದಾನ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಕಾರ್ಯಕ್ರಮದ ಸಂಘಟನೆಯನ್ನು ಶ್ರೀ ಅರವಿಂದ ಯೆಂಬೆಗೇರಿ, ಬಸವರಾಜ ಕುಪ್ಪಸದ್ ಮಾಡಿದರು.



ಜಿಲ್ಲಾಡಳಿತ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ವತಿಯಿಂದ ಆಯೋಜಿಸಿದ್ದ ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಕೆ.ಜಿ.ಎಸ್. ನಂಬರ-3 ಶಾಲೆಯಲ್ಲಿ ಜಿಲ್ಲಾ ಸಂಸ್ಥೆಯ ಪರವಾಗಿ ಬಸವೇಶ್ವರ ಪ್ರೌಢಶಾಲೆ ಮತ್ತು ಸರಕಾರಿ ಕನ್ನಡ ಗಂಡು ಮಕ್ಕಳ ಶಾಲೆ ನಂಬರ - 4, ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸೇವೆಯನ್ನು ಮಾಡಿರುತ್ತಾರೆ. ಶ್ರೀ ಜಿ.ಬಿ. ಇದ್ದಲಗಿ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಮತ್ತು ಜಿಲ್ಲಾ ಕಾರ್ಯದರ್ಶಿ ಶ್ರೀ ಎ. ಸಾವಳಗಿ, ಜಿಲ್ಲಾ ಸಂಘಟನಾ ಆಯುಕ್ತರು, ಶ್ರೀ ಎಂ.ಎಂ. ಹಳ್ಳೂರ ಮತ್ತು ಶ್ರೀಮತಿ ಪಿ.ಜಿ. ಬಂದಿಕೇರಿ, ಸ್ಕೌಟ್ ಮಾಸ್ಟರ್‌ಗಳಾದ ಶ್ರೀ ಶಿಕ್ಕೇರಿ ಮತ್ತು ಗೈಡ್ ಕ್ಯಾಪ್ಟನ್ ಗಳಾದ ಶ್ರೀಮತಿ ಅರಬ್ಬಿ ರವರುಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಜಿಲ್ಲಾಡಳಿತ ಮತ್ತು ಹೋಂಗಾರ್ಡ್ ರವರು ಏರ್ಪಡಿಸಿದ್ದ ರಾಷ್ಟ್ರೀಯ ವಿಪತ್ತು ಕಡಿಮೆ ಗೊಳಿಸುವ ದಿನಾಚರಣೆಯನ್ನು ತಹಶೀಲ್ದಾರ ಕಛೇರಿಯ ಆವರಣದಲ್ಲಿ ಆಚರಿಸಲಾಯಿತು. ಅಧ್ಯಕ್ಷತೆ ವಹಿಸಿ ಮಾತನಾಡಿದ ಜಿಲ್ಲಾಧಿಕಾರಿಯವರು ವಿಪತ್ತು ನಿರ್ವಹಣೆಯ ಕುರಿತು ಪ್ರತಿಯೊಬ್ಬರು ಕನಿಷ್ಠ ಮಾಹಿತಿ ಹೊಂದಿದ್ದರೆ ಸಾಕು ಎಂತಹ ವಿಪತ್ತು ಎದುರಾದರೂ ಅದನ್ನು ಸಮರ್ಥವಾಗಿ ನಿರ್ವಹಿಸುವುದು ಸುಲಭವಾಗುತ್ತದೆ ಎಂದು ತಿಳಿಸಿದರು. ನಂತರ ಪಥಸಂಚಲನ ನಡೆಯಿತು. ಜಿಲ್ಲಾ ಸಂಸ್ಥೆಯ ಪರವಾಗಿ ಜಿಲ್ಲಾ ಆಯುಕ್ತರು ಸ್ಕೌಟ್ಸ್ ಶ್ರೀ ಜಿ.ಬಿ. ಇದ್ದಲಗಿ ಮತ್ತು ಜಿಲ್ಲಾ ಕಾರ್ಯದರ್ಶಿ ಶ್ರೀ ಸಿ.ಎ. ಸಾವಳಗಿ, ಜಿಲ್ಲಾ ಸಂಘಟನಾ ಆಯುಕ್ತರು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಾದ ಶ್ರೀ ಎಂ.ಎಂ. ಹಳ್ಳೂರ ಮತ್ತು ಶ್ರೀಮತಿ ಪಿ.ಜಿ. ಬಂದಿಕೇರಿ ಹಾಗೂ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಸ್ಕೌಟ್ಸ್ ಶ್ರೀ ಎ.ಎಸ್. ಶಿವಕುಮಾರ, ರೋವರ್ಸ್ ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು – ಸ್ಕೌಟ್ ಮಾಸ್ಟರಗಳು, ಗೈಡ್ ಕ್ಯಾಪ್ಟನ್‌ಗಳು ಮತ್ತು ರೋವರ್ ಲೀಡರ್ಸ್‌ಗಳು ಭಾಗವಹಿಸಿದ್ದರು.

## ಹಾಸನ

ದಿನಾಂಕ 19–01–2010 ರಂದು ಹಾಸನ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ವಿಭಾಗೀಯ ಮಟ್ಟದ ಸಹಾಯಕ ಜಿಲ್ಲಾ ಆಯುಕ್ತರುಗಳ ಹಾಗೂ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳ ಸಮಾವೇಶವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ವೈಎಸ್. ವೀರಭದ್ರಪ್ಪರವರ ಅಧ್ಯಕ್ಷತೆಯಲ್ಲಿ ಉದ್ಘಾಟಿಸಲಾಯಿತು

ಸ್ಕೌಟಿಂಗ್ ಮೂಲ ತತ್ವಗಳು, ಸ್ಥಳೀಯ ಸಂಸ್ಥೆಯ ವಾರ್ಷಿಕ ಯೋಜನೆ ಹಾಗೂ ನಿರ್ವಹಣೆ, ರಾಜ್ಯ ಮಟ್ಟದ ಹಾಗೂ ರಾಷ್ಟ್ರ ಮಟ್ಟದ ಕಾರ್ಯಕ್ರಮಗಳು, ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್ ಬುಲ್ಸ್‌ಗಳ ಪ್ರಗತಿಪರ ತರಬೇತಿ, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳ ಹಾಗೂ ಸಹಾಯಕ ಜಿಲ್ಲಾ ಆಯುಕ್ತರುಗಳ ಕರ್ತವ್ಯ ಹಾಗೂ ಜವಾಬ್ದಾರಿಗಳ ಬಗ್ಗೆ ತಿಳಿಸಲಾಯಿತು.

ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ ಹಾಸನದ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆಂಚೇಗೌಡರವರು ಮುಖ್ಯ ಅತಿಥಿಗಳಾಗಿ ಆಗಮಿಸಿ, ಇಲಾಖಾ ಸಹಾಯ, ಸಹಕಾರಗಳನ್ನು ನೀಡುವುದಾಗಿ ತಿಳಿಸಿದರು. ಸಭೆಯಲ್ಲಿ ಜಿಲ್ಲಾ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿರವರು ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ಶ್ರೀಯುತ ಮುತ್ತೇಗೌಡ ಇವರಿಗೆ ಪ್ರೀ. ಎ.ಎಲ್.ಟಿ. ಪ್ರಮಾಣ ಪತ್ರವನ್ನು ವಿತರಿಸಿ ಅಭಿನಂದಿಸಲಾಯಿತು.

ಗೈಡ್ ಆಯುಕ್ತರಾದ ಶ್ರೀಮತಿ ಶೈಲಾ ಅಭಿನಂದನ್, ಹೆಚ್.ಎಂ. ಗೌಡಯ್ಯ, ಎ.ಡಿ.ಸಿ. ಜಿಲ್ಲಾ ಕಾರ್ಯದರ್ಶಿ, ಎಂ.ಎಸ್. ಪ್ರಕಾಶ್, ಜಿಲ್ಲಾ ಸಂಸ್ಥೆ, ಹಾಸನ, ಇವರುಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಡಾ. ವೈ.ಎಸ್. ವೀರಭದ್ರಪ್ಪ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ಶಿಬಿರದಲ್ಲಿ ಹಾಸನ, ದಕ್ಷಿಣ ಕನ್ನಡ, ಉಡುಪಿ, ಜಿಲ್ಲೆಗಳಿಂದ ಒಟ್ಟು 40 ಶಿಬಿರಾರ್ಥಿಗಳು ಪಾಲ್ಗೊಂಡಿದ್ದರು.

**ಜಿಲ್ಲಾಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ :** ದಿನಾಂಕ: 19–02–2010 ಮತ್ತು 20–02–2010 ರಂದು ಶ್ರೀ ಕ್ಷೇತ್ರ ಶ್ರವಣಗೊಳದಲ್ಲಿ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ಮೇಳವು ಶ್ರೀ ಕ್ಷೇತ್ರ ಜೈನ ಮಠ ಹಾಗು ಶ್ರವಣಬೆಳಗೊಳ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆಯ ಸಹಯೋಗದೊಂದಿಗೆ ನಡೆಯಿತು. ಮೇಳದ ಉದ್ಘಾಟನೆಯನ್ನು ಶ್ರವಣಬೆಳಗೊಳ ಕ್ಷೇತ್ರದ ಶಾಸಕರಾದ ಶ್ರೀ ಸಿ.ಎನ್. ಮಟ್ಟೀಗೌಡರು ಜ್ಯೋತಿ ಬೆಳಗಿಸುವುದರ ಮೂಲಕ ನೆರವೇರಿಸಿ ಮಾತನಾಡುತ್ತಾ ಅಪರಾಧಿಗಳು, ಸ್ವಾರ್ಥಪರರು ಹೆಚ್ಚಾಗಿರುವ ಸಮಾಜದಲ್ಲಿ ಆತಂಕಗಳು ಹೆಚ್ಚಾಗುತ್ತಿವೆ. ನೆರೆಹೊರೆಯವರು ತೊಂದರೆಗೆ ಸಿಲುಕಿದಾಗ ಅವರನ್ನು ಕಾಪಾಡುವ ಮೂಲಕ ಸೇವಾ ಮನೋಭಾವನೆ ರೂಢಿಸಿಕೊಳ್ಳಬೇಕು ಎಂದರು.

ಜಿಲ್ಲಾ ಪಂಚಾಯ್ತಿ ಮಾಜಿ ಅಧ್ಯಕ್ಷರಾದ ಶ್ರೀ ಸಿ.ಎನ್. ಬಾಲಕೃಷ್ಣರವರು ಮಾತನಾಡುತ್ತಾ ಗಡಿಯಲ್ಲಿ ಸೈನಿಕರು ದೇಶ ರಕ್ಷಣೆಗಾಗಿ ಹಗಲಿರುಳು ಶ್ರಮಿಸುತ್ತಿದ್ದಾರೆ. ದೇಶದ ಒಳಗಿನ ನಾಗರೀಕರು ಕೂಡಾ ದೇಶ್ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಸೇವಾ ಮನೋಭಾವನೆಯನ್ನು ಬೆಳೆಸಿಕೊಳ್ಳಲು ಕರೆನೀಡಿದರು. ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಕೆ.ಸಿ. ಕೃಷ್ಣಶೆಟ್ಟಿರವರು ಸ್ಕೌಟ್ಸ್ – ಗೈಡ್ಸ್ ಮಕ್ಕಳನ್ನು ಕುರಿತು ಮಾತನಾಡಿ ಸ್ಕೌಟ್-ಗೈಡ್ ಸಂಸ್ಥೆಯು ಅಂತರ ರಾಷ್ಟ್ರೀಯ ಸಂಸ್ಥೆಯಾಗಿದ್ದು, ಮಕ್ಕಳಲ್ಲಿ ಶಿಸ್ತು ಸೇವಾ ಭಾವನೆ, ರಾಷ್ಟ್ರೀಯ ಬಾವೈಕ್ಯತೆಯನ್ನು ಮೂಡಿಸುವುದು, ಎಂದು ತಿಳಿಸಿದರು. ಜಿಲ್ಲಾ ಪಂಚಾಯ್ತಿ ಉಪಾಧ್ಯಕ್ಷ ಏ. ಈ. ಚಂದ್ರಶೇಖರ್, ಸದಸ್ಯ, ಎಂ. ಕೆ. ಮಂಜೇಗೌಡ, ಬಿ.ಇ.ಓ.ಎಂ. ಕುಮಾರಸ್ವಾಮಿ, ತಾ. ಪಂ.ಇ.ಓ. ವೆಂಕಟೇಶಯ್ಯರವರು ಉಪಸ್ಥಿತರಿದ್ದು ಮಾತನಾಡಿದರು.

ಸಮಾರಂಭದಲ್ಲಿ ಗ್ರಾಮ ಪಂಚಾಯ್ತಿ ಅಧ್ಯಕ್ಷರಾದ ರವಿನಂಜಪ್ಪ, ಸಿ.ಎನ್. ಕಾಂತರಾಜು, ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಮುಖ್ಯ ಆಯುಕ್ತರಾದ ಡಾ: ವೈ.ಎನ್. ವೀರಭದ್ರಪ್ಪ, ಜಿಲ್ಲಾ ಸ್ಕೌಟ್ಸ್ ಆಯುಕ್ತ ಶ್ರೀಯುತ ಪ್ರಕಾಶ್, ಎಸ್. ಯಾಜಿ, ರವರು ಗೈಡ್ ಆಯುಕ್ತೆ, ಶ್ರೀಮತಿ ಶೈಲಾ ಅಭಿನಂದನ್, ಹೆಚ್.ಎಂ. ಗೌಡಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು, ಕೆ.ಎನ್. ರಾಮಸ್ವಾಮಿ, ಶ್ರವಣಬೆಳಗೊಳ ಸಂಸ್ಥೆಯ ಅಧ್ಯಕ್ಷರು, ಮಹಾಲಕ್ಷ್ಮಿ ಬೊಮ್ಮೆಗೌಡರು, ಮುಂತಾದವರು ಉಪಸ್ಥಿತರಿದ್ದರು.

### ಸಮಾರೋಪ ಸಮಾರಂಭ



ದಿನಾಂಕ: 20-02-2010 ರಂದು ಶ್ರೀ ಕ್ಷೇತ್ರ ಶ್ರವಣಬೆಳಗೊಳದ ಚಾವುಂಡರಾಯ ಮಂಟಪದಲ್ಲಿ ಪರಮ ಪೂಜ್ಯ ಜಗದ್ಗುರು ಕರ್ಮಯೋಗಿ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿಯವರ ದಿವ್ಯ ಸಾನಿಧ್ಯದಲ್ಲಿ ಸಮಾರೋಪ ಸಮಾರಂಭವು ನಡೆಯಿತು. ಸಾನಿಧ್ಯ ವಹಿಸಿ ಮಾತನಾಡಿದ ಪೂಜ್ಯರು ಎಲ್ಲರೂ ದೇಶ ಸೇವೆಗೆ ಕಟಿಬದ್ಧರಾಗಿ ನಿಂತು ಸಮಸ್ಯೆಗಳನ್ನು ಸೌಹಾರ್ದಯುತವಾಗಿ ಬಗೆಹರಿಸಿಕೊಳ್ಳುವ ಮನೋಭಾವ ಪ್ರತಿಯೊಬ್ಬರಲ್ಲಿಯೂ ಮೂಡಬೇಕೆಂದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯದ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪರವರು ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಮಾತನಾಡಿ ಯುವ ಜನಾಂಗಕ್ಕೆ, ಆದರ್ಶ ಕಾರ್ಯಗಳಿಗೆ ಪ್ರೋತ್ಸಾಹ ನೀಡುವುದು ಸಮಾಜಸೇವೆ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಗುರಿಯಾಗಿದೆ ಎಂದು ತಿಳಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಡಾ: ವೈ. ಎನ್. ವೀರಭದ್ರಪ್ಪರವರು ಮಾತನಾಡಿ ನೀತಿ, ಧರ್ಮ, ಶಿಸ್ತು ಪಾಲನೆ, ಆಧ್ಯಾತ್ಮಿಕ ಚಿಂತನೆ, ರಾಷ್ಟ್ರೀಯ ಭಾವೈಕ್ಯತೆ ಮುಂತಾದವುಗಳನ್ನು ಸ್ಕೌಟಿಂಗ್ -ಗೈಡಿಂಗ್ ಸಂಸ್ಥೆಯು ಮಕ್ಕಳಲ್ಲಿ ಮೂಡಿಸುತ್ತಿದೆ ಎಂದು ತಿಳಿಸಿದರು.

ಸ್ಕೌಟ್-ಗೈಡ್ ಮೇಳದಲ್ಲಿ ಜಿಲ್ಲೆಯ ಎಲ್ಲಾ ತಾಲ್ಲೋಕುಗಳಿಂದ 1080 ಸ್ಕೌಟ್ಸ್ -ಗೈಡ್ಸ್‌ಗಳು ಹಾಗೂ 82 ಸ್ಕೌಟ್ ಶಿಕ್ಷಕರು, ಗೈಡ್ ಶಿಕ್ಷಕಿಯರುಗಳು ಭಾಗವಹಿಸಿದ್ದರು.

ಮೇಳದಲ್ಲಿ ಮಕ್ಕಳಿಗಾಗಿ, ರಂಗೋಲಿಸ್ಪರ್ಧೆ, ಬೆಂಕಿ ಇಲ್ಲದೆ ಅಡುಗೆ ಮಾಡುವುದು, ಸುಧಾರಿತ ಗುಡಾರಗಳ ನಿರ್ಮಾಣ, ಧ್ವಜಸ್ತಂಬ ನಿರ್ಮಾಣ, ಮಣ್ಣಿನಲ್ಲಿ ವಿವಿಧ ತರಹದ ಕ್ಲೇ ಮಾಡೆಲಿಂಗ್ ಮಾಡುವುದು, ಕರಕುಶಲತೆ, ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿ ಸ್ಪರ್ಧೆಗಳಲ್ಲಿ ವಿಜೇತ ಸ್ಕೌಟ್ಸ್-ಗೈಡ್ಸ್ ಮಕ್ಕಳಿಗೆ ಬಹುಮಾನ ಹಾಗೂ ನೆನಪಿನಕಾಣಿಕೆಗಳನ್ನು ವಿತರಿಸಲಾಯಿತು. ಭಗವಾನ್ ಬಾಹುಬಲಿಯ ಸನ್ನಿಧಿಯಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಳ್ಳಲಾಗಿತ್ತು.

### ಸಂಸ್ಥಾಪಕರ ದಿನಾಚರಣೆ

ದಿನಾಂಕ: 22-02-2010 ರಂದು ಸೋಮವಾರ ನಗರದ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದ ಆವರಣದಲ್ಲಿ ಲಾರ್ಡ್ ಬೇಡನ್ ಪೊವೆಲ್ ಹಾಗೂ ಲೇಡಿ ಬೇಡನ್ ಪೊವೆಲ್‌ರವರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು.

ಧ್ವಜಾರೋಹಣ ಕಾರ್ಯಕ್ರಮದೊಂದಿಗೆ ಸಮಾರಂಭ ಪ್ರಾರಂಭವಾಯಿತು. ಸಮಾರಂಭದ ಉದ್ಘಾಟನೆಯನ್ನು ಶ್ರೀಮತಿ ಶೈಲಾ ಅಭಿನಂದನ್ ಜಿಲ್ಲಾ ಗೈಡ್ ಆಯುಕ್ತರು ದೀಪ ಬೆಳಗಿಸುವುದರ ಮೂಲಕ ನೆರವೇರಿಸಿ ಮಾತನಾಡುತ್ತಾ ಇಂದು ವಿಶ್ವದಾದ್ಯಂತ ಸ್ಕೌಟ್-ಗೈಡ್ ಸಂಸ್ಥಾಪಕರ ದಿನಾಚರಣೆಯನ್ನು ವಿಶ್ವ ಸ್ಕೌಟ್ ದಿನ ಹಾಗೂ ಚಿಂತನಾ ದಿನವನ್ನಾಗಿ ಆಚರಿಸಲಾಗುತ್ತಿದೆ ಎಂದು ತಿಳಿಸಿ, ಲಾರ್ಡ್ ಬೇಡನ್ ಪೋವೆಲ್ ಹಾಗೂ ಲೇಡಿ ಬೇಡನ್ ಪೋವೆಲ್ ರವರ ಆದರ್ಶ ತತ್ವಗಳನ್ನು ಪಾಲಿಸುವಂತೆ ಕರೆನೀಡಿದರು.

ಸಮಾರಂಭದ ಅಧ್ಯಕ್ಷತೆಯನ್ನು ಶ್ರೀಯುತ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಸ್ಕೌಟ್ ಆಯುಕ್ತರು ವಹಿಸಿ ಮಾತನಾಡಿ ನಾವೆಲ್ಲರು ಬೇಡನ್ ಪೊವೆಲ್ ರವರ ಆದರ್ಶವನ್ನು ಪಾಲಿಸಿ ದೇಶಕ್ಕೆ ದೊಡ್ಡ ಆಸ್ತಿಯಾಗಬೇಕೆಂದು ತಿಳಿಸಿದರು. ಶ್ರೀಯುತ ಆರ್. ಸಿ. ಬೈರಪ್ಪ, ಸಹಕಾರ್ಯದರ್ಶಿ, ಹಾಸನ ಇವರು ಸರ್ವರನ್ನು ಸ್ವಾಗತಿಸಿದರು. ಸಮಾರಂಭದಲ್ಲಿ ಶ್ರೀ ಎಂ. ಎಸ್. ಪ್ರಕಾಶ್ ಜಿಲ್ಲಾ ಕಾರ್ಯದರ್ಶಿ, ವಂದನೆ ಸಲ್ಲಿಸಿದರು. ಶ್ರೀಯುತ ಎನ್. ಆರ್. ಚಂದ್ರಾಚಾರ್, ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಹಾಸನ ಇವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಸ್ಕೌಟ್ ಗೀತೆಯನ್ನು ಹೇಳಿಕೊಟ್ಟರು, ಶ್ರಿಯುತ ಎಲ್.ಟಿ. ಲೋಕೇಶ್, ರಾಜ್ಯ ಸಹ ಸಂಘಟನಾ ಆಯುಕ್ತರು ಕಾರ್ಯಕ್ರಮ ನಿರೂಪಣೆ ಮಾಡಿದರು.

ಇನ್ನೋರ್ವ ಅತಿಥಿಯಾಗಿ ಆಗಮಿಸಿದ್ದ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್) ಆದ ಶ್ರೀ ಪ್ರೇಮಸೇನ್ ಶ್ರವಣಬೆಳಗೊಳ ಇವರು ಸ್ಕೌಟ್-ಗೈಡ್ಸ್‌ಗಳನ್ನು ಕುರಿತು ಮಾತನಾಡಿ ಸಾಮಾನ್ಯ ಮಕ್ಕಳಿಗಿಂತ ಸ್ಕೌಟ್-ಗೈಡ್‌ಗಳು ಭಿನ್ನರಾಗಿರುತ್ತಾರೆ ಎಂದು ತಿಳಿಸಿದರು.

# ರಾಯಚೂರು

ದಿನಾಂಕ: 23-01-2010 ರಂದು ರಾಯಚೂರಿನಲ್ಲಿ ನೇತಾಜಿ ಸುಭಾಷ್ ಚಂದ್ರಬೋಸ್ ಅವರ ಜನ್ಮ ದಿನಾಚರಣೆಯನ್ನು ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳ ಸಹಯೋಗದೊಂದಿಗೆ ಜೆ.ಸಿ.ಐ. ಸಂಸ್ಥೆಯವರು ಆಯೋಜಿಸಿದ್ದರು. ಮಹಾತ್ಮಾಗಾಂಧಿ ಕ್ರೀಡಾಂಗಣದಿಂದ ಮೆರವಣಿಗೆಯಲ್ಲಿ ತೆರಳ ಮಾವಿನ ಕೆರೆ ಹತ್ತಿರದ ನೇತಾಜಿ ಸುಭಾಷ್‌ಚಂದ್ರ ಬೋಸ್‌ರವರ ಪುತ್ಥಳಿಗೆ ಮಾಲಾರ್ಪಣೆ ಮಾಡುವ ಮೂಲಕ ಜನ್ಮ ದಿನಾಚರಣೆ ಆಚರಿಸಲಾಯಿತು. ಡಿ.ವೈ.ಎಸ್.ಪಿ. ಶ್ರೀಧರ್ ರಾವ್, ಕ್ಷೇತ್ರಶಿಕ್ಷಣಾಧಿಕಾರಿ ಶ್ರೀಮತಿ ಆರ್. ಇಂದಿರಾ, ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಘಟಕದ ನಾಯಕರಾದ ಶ್ರೀ ಹನುಮಂತರಾವ್ ಹಾಗೂ ಗೈಡ್ ಘಟಕದ ನಾಯಕರಾದ ಶ್ರೀಮತಿ ಬಸಮ್ಮ ಇವರಿಗೆ ಉತ್ತಮ ಸ್ಕೌಟ್ ಮಾಸ್ಟರ್ ಮತ್ತು ಉತ್ತಮ ಗೈಡ್ ಕ್ಯಾಪ್ಟನ್‌ರೆಂದು ಆಯ್ಕೆಮಾಡಿ ಜೆ.ಸಿ.ಐ. ಸಂಸ್ಥೆಯ ವತಿಯಿಂದ ಗೌರವಿಸಲಾಯಿತು.

ಈ ಸಂದರ್ಭದಲ್ಲಿ ಜೆ.ಸಿ.ಐ. ಅಧ್ಯಕ್ಷ ಶ್ರೀ ಮಧು, ಕಮಲಕುಮಾರ ಜೈನ್, ಶ್ರೀ ಗೋವಿಂದರಾಜು, (ಸ್ಕೌಟ್) ಶ್ರೀಮತಿ ಕಲ್ಯೆವಾಣಿ, ಡಿ.ಟಿ.ಸಿ. (ಗೈಡ್), ಶ್ರೀಮತಿ ಭುವನೇಶ್ವರಿ, ಡಿ.ಓ.ಸಿ. (ಗೈಡ್), ಶ್ರೀ ರಾವುತರಾವ್ ಬರೂರ, ಡಿ.ಓ.ಸಿ. (ಎಸ್.) ಹಾಗೂ 200 ಸ್ಕೌಟ್‌ಗಳು ಭಾಗವಹಿಸಿದ್ದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ ಜಿಲ್ಲಾಸಂಸ್ಥೆ ರಾಯಚೂರಿನ ಪ್ರಧಾನ ಕಾರ್ಯಾಲಯದಲ್ಲಿ 61ನೇ ಗಣರಾಜ್ಯೋತ್ಸವದ ಅಂಗವಾಗಿ ಧ್ವಜಾರೋಹಣ ಕಾರ್ಯಕ್ರಮವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯ ನೆರವೇರಿಸಿದರು. ಈ ಸಂದರ್ಭದಲ್ಲಿ ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು (ಗೈ) ಜಿಲ್ಲಾ ಖಜಾಂಚಿ ಶ್ರೀಹೆಚ್. ಹನುಮಂತಪ್ಪ, ಕಾರ್ಯದರ್ಶಿ ಶ್ರೀ ಅಮರೇಗೌಡ ಪಾಟೀಲ, ನಗರಸಭೆ ಸದಸ್ಯೆ ಶ್ರೀಮತಿ ಪುಷ್ಪಾರುದ್ರಪ್ಪ ಅಂಗಡಿಯವರು ಉಪಸ್ಥಿತರಿದ್ದರು. ನಂತರ ಜಿಲ್ಲಾ ಕ್ರೀಡಾಂಗಣದಲ್ಲಿ ಸಾರ್ವಜನಿಕ ಧ್ವಜಾರೋಹಣದ ಪರೇಡ್‌ನಲ್ಲಿ 6 ಶಾಲೆಯ ತಂಡಗಳು (ಸ್ಕೌಟ್ಸ್ ಮತ್ತು ಗೈಡ್ಸ್) ಭಾಗವಹಿಸಿದ್ದವು. ಉತ್ತಮ ಪ್ರದರ್ಶನ ನೀಡಿದ 3 ತಂಡಗಳಿಗೆ ಸನ್ಮಾನ್ಯಶ್ರೀ ಶಿವನಗೌಡ ನಾಯಕ ಸಚಿವರು ಮತ್ತು ಶಾಸಕರಾದ ಸೈಯ್ಯದ್ ಯಾಶಿನ್ ಇವರು ಪ್ರಶಸ್ತಿಪತ್ರನೀಡಿ ಸನ್ಮಾನಿಸಿದರು.



ದಿನಾಂಕ: 5-2-2010 ರಿಂದ 6-2-2010 ರ ವರೆಗೆ ಭಾರತ್ ಸ್ಕೌಟ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ರಾಯಚೂರು, ಕಬ್ಸ್ ಮತ್ತು ಬುಲ್ ಬುಲ್ ವಿದ್ಯಾರ್ಥಿಗಳಿಗೆ 2009-10ನೇ ಸಾಲಿನ ಸಿಕ್ಸರ್ ಕ್ಯಾಂಪ್ ಹಾಗೂ ಚತುರ್ಥ ಚರಣ್ ಮತ್ತು ಹೀರಕ್‌ಪಂಕ್ ಪರೀಕ್ಷಾ ಶಿಬಿರವನ್ನು ಹಮ್ಮಿಕೊಳ್ಳಲಾಯಿತು. ಈ ಶಿಬಿರದಲ್ಲಿ 180 ಕಬ್ಸ್, ಬುಲ್ ಬುಲ್ಸ್‌ಗಳು ಭಾಗವಹಿಸಿದ್ದರು. 6 ಜನ ಕಬ್ ಮಾಸ್ಟರ್ ಮತ್ತು ನಾಲ್ಕು ಫ್ಲಾಕ್ ಲೀಡರ್ ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ವೀರಭದ್ರಯ್ಯ, ಜಿಲ್ಲಾ ಸಂಘಟನಾ ಆಯುಕ್ತರು ಗುಲ್ಬರ್ಗಾ ಇವರು ಆಗಮಿಸಿದ್ದರು. ಕಬ್ಸ್ ಚತುರ್ಥ ಚರಣ್ ಪರೀಕ್ಷೆಗೆ 45 ಕಬ್ಸ್‌ಗಳು ಹಾಗೂ ಹೀರಕ್ ಪಂಖ್ ಪರೀಕ್ಷೆಗೆ 20 ಬುಲ್ ಬುಲ್‌ಗಳು ಹಾಜರಿದ್ದರು. ಶಿಬಿರದ ಉದ್ಘಾಟಕರಾಗಿ ಶ್ರೀಮತಿ ಪುಷ್ಪಾ ರುದ್ರಪ್ಪ ಅಂಗಡಿ ಆಗಮಿಸಿದ್ದರು. ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ ವಹಿಸಿದ್ದರು. ಮುಖ್ಯ ಅತಿಥಿಯಾಗಿ ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿ ಶ್ರೀ ಆರ್. ನಾಗಪ್ಪ ಆಗಮಿಸಿದ್ದರು. ಇದೇ ಸಂದರ್ಭದಲ್ಲಿ ಜಿಲ್ಲಾ ಆಯುಕ್ತರು (ಗೈಡ್) ಶ್ರೀಮತಿ ಅಜೀಜಾ ಸುಲ್ತಾನ, ಆರ್. ಹೆಚ್. ಸಾಗರ, ತರಬೇತಿ ಆಯುಕ್ತ (ಸ್ಕೌಟ್) ಶ್ರೀ ಶೇಖರ್, ಜಿಲ್ಲಾ ತರಬೇತಿ ಆಯುಕ್ತ ಗೈಡ್ ಕಲ್ಯೆವಾಣಿ, ರಾಘು, ಗಿರೀಶ ಚಂದ್ರಶೇಖರ ಭಂಡಾರಿ ಭಾಗವಹಿಸಿದ್ದರು.

**ಹಸಿರು ಬೆಳೆಸಿ - ಭೂಮಿಯ ತಾಪಮಾನ ಇಳಿಸಿ**

**Grow Green To Combat Global Warming**

## ರಾಮನಗರ

### ಘಟಕ ನಾಯಕರುಗಳ ಮೂಲತರಬೇತಿ ಶಿಬಿರ ಹಾಗೂ ಮುಂದುವರೆದ ತರಬೇತಿ ಶಿಬಿರಗಳು.

ದಿನಾಂಕ : 05-02-2010 ರಿಂದ 11-02-2010ರ ವರೆಗೆ ಡಾ|| ಆ್ಯನಿಬೆಸೆಂಟ್ ಪಾರ್ಕ್ ದೊಡ್ಡಬಳ್ಳಾಪುರದಲ್ಲಿ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ ರಾಮನಗರ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ರಾಮನಗರ ಇವರ ಸಂಯುಕ್ತ ಆಶ್ರಯದಲ್ಲಿ ಘಟಕ ನಾಯಕರ ತರಬೇತಿ ಶಿಬಿರವನ್ನು ನಡೆಸಲಾಯಿತು. 32 ಶಿಕ್ಷಕರಿಂದ ಕೂಡಿದ ಸ್ಕೌಟ್ ಮಾಸ್ಟರ್ ಮೂಲ ತರಬೇತಿ ಶಿಬಿರದ ನಾಯಕರಾಗಿ ಶ್ರಿ ಟಿ.ಎ. ಮಂಜುನಾಥಾಚಾರ್, ಎಲ್.ಟಿ.(ಸ್ಕೌಟ್) 13 ಶಿಕ್ಷಕ/ಶಿಕ್ಷಕಿಯರಿಂದ ಕೂಡಿದ ಕಬ್ ಮಾಸ್ಟರ್ ಮೂಲ ತರಬೇತಿ ಶಿಬಿರದ ನಾಯಕಿ ಶ್ರಿಮತಿ ರಾಧಮ್ಮ, ಎ.ಎಲ್.ಟಿ.,(ಕ) 9 ಶಿಕ್ಷಕಿಯರ ಫ್ಲಾಕ್ ಲೀಡರ್ ತರಬೇತಿ ಶಿಬಿರದ ನಾಯಕಿಯಾಗಿ ಶ್ರೀಮತಿ ನಿರ್ಮಲಾ ಕಲಾಶೆಟ್ಟಿ, ಎಲ್.ಟಿ.,(ಗೈಡ್) 14 ಶಿಕ್ಷಕಿಯರ ಗೈಡ್ ಕ್ಯಾಪ್ಟನ್ ತರಬೇತಿ ಶಿಬಿರದ ನಾಯಕಿಯಾಗಿ ಕುಮಾರಿ ಹೊನ್ನಮ್ಮ, ಎ.ಎಲ್.ಟಿ.(ಗೈ) 20 ಶಿಕ್ಷಕರ ಸ್ಕೌಟ್ ಮಾಸ್ಟರ್‌ಗಳ ಮುಂದುವರೆದ ತರಬೇತಿ ಶಿಬಿರದ ನಾಯಕರಾಗಿ ಶ್ರೀ ಓಮೇಶ್ವರಯ್ಯ, ಎ.ಎಲ್.ಟಿ.(ಸ್ಕೌಟ್) ಮತ್ತು 9 ಶಿಕ್ಷಕಿಯರ ಗೈಡ್ ಕ್ಯಾಪ್ಟನ್‌ಗಳ ಮುಂದುವರೆದ ತರಬೇತಿ ಶಿಬಿರದ ನಾಯಕಿಯಾಗಿ ಶ್ರೀಮತಿ ವನಜಾಕ್ಷಮ್ಮ, ಎ.ಎಲ್.ಟಿ. (ಗೈಡ್) ನವರು ಕಾರ್ಯನಿರ್ವಹಿಸಿದರು.

ದಿನಾಂಕ : 05-02-2010 ರಂದು ನಡೆದ ಸಂಜೆ 4 ಗಂಟೆಗೆ ಶಿಬಿರಗಳ ಉದ್ಘಾಟನೆಯನ್ನು ಶ್ರೀ ಶಿವನಂಜಪ್ಪ, ಜಿಲ್ಲಾ ಕಾರ್ಯದರ್ಶಿಯವರು ನೆರವೇರಿಸಿದರು. ದಿನಾಂಕ : 10-02-2010 ರಂದು ಸಮಾರೋಪ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಭಾಗವಹಿಸಿ ಶಿಬಿರಾರ್ಥಿಗಳನ್ನುದ್ದೇಶಿಸಿ ಹಿತವಚವನ್ನು ನುಡಿದರು.

ಅತಿಥಿ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಎನ್. ಶ್ರೀನಿವಾಸನ್, ಎಲ್.ಟಿ. (ಸ್ಕೌಟ್), ರಾಜ್ಯ ಜಂಟಿ ಕಾರ್ಯದರ್ಶಿ (ಸ್ಕೌಟ್ಸ್) ಶ್ರೀ ಚಿನ್ನಸ್ವಾಮಿ ರೆಡ್ಡಿ, ಎಲ್.ಟಿ. (ಸ್ಕೌಟ್ಸ್) ಕೆಂದ್ರ ಸ್ಥಾನಿಕ ಆಯುಕ್ತರು (ಸಾರ್ವಜನಿಕ ಸಂಪರ್ಕ) ಶ್ರೀಮತಿ ಜಾನಕಿ ವೇಣುಗೋಪಾಲ್, ಎಲ್.ಟಿ.(ಗೈಡ್ಸ್) ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್) ಹಾಗೂ ಜಿಲ್ಲಾ ಸಂಯೋಜಕರು ಮತ್ತು ಶ್ರೀಮತಿ ಕೆ.ಕೆ. ಲೀಲಾ, ಎಲ್.ಟಿ.(ಗೈಡ್ಸ್) ರಾಜ್ಯ ತರಬೇತಿ ಆಯುಕ್ತರು(ಗೈಡ್ಸ್) ರವರು ಭಾಗವಹಿಸಿ ಶಿಬಿರಾರ್ಥಿಗಳಿಗೆ ಪಾಠಪ್ರವಚನವನ್ನು ನೀಡಿದರು.

ಶ್ರೀ ನರಸಿಂಹ ಮೂರ್ತಿ ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ರಾಮನಗರ, ಇವರು ಶಿಬಿರಕ್ಕೆ ಭೇಟಿ ನೀಡಿದರು. ಶಿಬಿರವು ಯಶಸ್ವಿಯಾಗಲು, ಶ್ರೀಮತಿ ಫಾಮೀದಾರಹೀಂ, ಉಪನಿರ್ದೇಶಕರು (ಅಭಿವೃದ್ಧಿ) ಶ್ರೀ ಅಪ್ಪಾಜಯ್ಯ, ಉಪನಿರ್ದೇಶಕರು (ಆಡಳಿತ) ಹಾಗೂ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ವಸಂತ್‌ಮಾಧವ್, ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಶ್ರೀಮತಿ ಭಾರತಿ, ಜಿಲ್ಲಾ ಆಯುಕ್ತರು (ಗೈಡ್ಸ್), 4 ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಹಕರಿಸಿದರು, ಶಿಬಿರದ ಮೇಲು ಉಸ್ತುವಾರಿಯನ್ನು ಶ್ರೀ ಶಿವನಂಜಪ್ಪ, ಜಿಲ್ಲಾ ಕಾರ್ಯದರ್ಶಿ ವಹಿಸಿದ್ದರು ಹಾಗೂ ಶ್ರೀ ಭುವನೇಶ್ವರಪ್ಪ, ಜಿಲ್ಲಾ ಕೋಶಾಧಿಕಾರಿಗಳು ಆಹಾರ ವಿತರಣೆಯನ್ನು ವಹಿಸಿದ್ದರು.

## ದಾವಣಗೆರೆ

ದಿನಾಂಕ: 13-02-2010 ರಂದು ಧರ್ಮರತ್ನಾಕರ ರಾಜನಹಳ್ಳಿ ಮದ್ದೂರಾಯಪ್ಪ ಸ್ಕೌಟ್ ಭವನದಲ್ಲಿ ನೇತಾಜಿ ಗ್ರೂಪ್ ನ ದಶಮಾನೋತ್ಸವ ಸಮಾರಂಭವು ನೆರವೇರಿತು.

ಈ ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿಯವರು ಅಧ್ಯಕ್ಷತೆಯನ್ನು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಎ.ಹಿ. ಷಡಾಕ್ಷರಪ್ಪ, ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಡಾ|| ಪಂಚಾಕ್ಷರಪ್ಪ, ಶ್ರೀ ನಯನ್ ಎಸ್. ಪಾಟೀಲ್ ಶ್ರೀಮತಿ ಮಂಜುಳಾ. ಸಿ. ಅವರು ಆಗಮಿಸಿದ್ದರು.

2010 ರ ಜಿಲ್ಲಾಡಳಿತದ ಗಣರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ಡಾ|| ಜಯಂತ್ ರವರಿಗೆ, ನೇತಾಜಿ, ಗ್ರೂಪ್‌ನ ಪ್ರಥಮ ರಾಷ್ಟ್ರಪತಿ ಸ್ಕೌಟ್ ಆದ ಜಿ.ವಿ. ವರುಣ್ ಇವರಿಗೆ ಮತ್ತು ನೇತಾಜಿ ಗ್ರೂಪ್‌ನ ದಶಮಾನೋತ್ಸವ ಸಮಾರಂಭಕ್ಕೆ ಮುಖ್ಯ ಕಾರಣರಾದ ನೇತಾಜಿ ಗ್ರೂಪ್‌ನ ನಾಯಕರಾದ ಶ್ರೀ ಜೆ.ಎಸ್. ವಿಜಯ್ ರವರಿಗೆ ಸನ್ಮಾನ ಮಾಡಲಾಯಿತು. ನಂತರ ರಾಷ್ಟ್ರಪತಿ ಪುರಸ್ಕಾರ ಪ್ರಶಸ್ತಿಯನ್ನು ವಿತರಿಸಲಾಯಿತು.

ಕಾರ್ಯಕ್ರಮದಲ್ಲಿ ಜಿಲ್ಲೆಯ ಎಲ್ಲಾ ಸ್ಕೌಟ್ ಮತ್ತು ಗೈಡ್ ಪದಾಧಿಕಾರಿಗಳು ನೇತಾಜಿ ಹಾಗೂ ಚೇತನ ಗ್ರೂಪ್‌ನ ಶಿಕ್ಷಕರು ಭಾಗವಹಿಸಿದ್ದರು.

# Bangalore North

**Shivajinagar Local Association** Celebrated the World Scout Day & Thinking Day on 19th February 2010 at St. Anthony's Boys High School St. John's Road, Bangalore.

Sri Kondajji B. Shanmukhappa, State Chief Commissioner was the Chief Guest and released a Book "Pearls of wisdom". The Book was written by Mrs. Mythili Sampath, LT.(G.) and former Asst. State Commissioner (Guide). Sri T.S. Lucas, State Commissioner (Scout) addressed the gathering. Smt. R. Nicodumus, President, Smt. Nirmala Prakash, Principal St. Anthony's Boys High School and vice- President. Smt. Samson Rani, Former Vice-President, Smt. Janaki Venugopal, State Organising Commissioner (G) Sri A.M. Shankar, ASOC (S) were present. Smt. Revathy. B. L.T. (B) Co-ordinated the programme.



**Banaswadi Local Association** Organised Badge work Camp from 9th to 10th January 2010 at Maruthi Vidyalaya High School Campus, Banaswadi, Bangalore. 270 Cubs, Bul Buls, Scouts and Guides attended the Camp. Smt. Lalitha Devi, Principal Maruthi Vidyalaya inaugurated the Camp.

Sri M.A. Chellaiah, Headquarters Commssioner (Publication) delivered the valedictory address. Sri Premkumar District Commissioner (Scout) Sri Sampth Kumar, Asst. District Commissioner (Scouts) addressed the participants. Smt. Agatha Mary, Sri Varthaman were the Leaders of the Camp Sri V.N. Kavali, Secretary Co-ordinated the programme.




## ದಾರವಾಡ

ಹುಬ್ಬಳ್ಳಿ ಓರಿಯಂಟಲ್ ಶಾಲೆಯ ಸ್ಕೌಟ್ಸ್ / ಗೈಡ್ಸ್ ಮಕ್ಕಳು ಸ್ನೇಹ ಸಮ್ಮೇಳನದಲ್ಲಿ ಉತ್ತಮ ಪ್ರದರ್ಶನ ನೀಡಿದರು.

...............ಹಿಂದಿನ ಸಂಚಿಕೆಯಿಂದ

ಅಧ್ಯಾಯ – 2 **ಕಾರ್ಯಸರಣಿ** ಶಿಬಿರಾಗ್ನಿ ಉದಂತ ಸಂ – 5

**ಧೃತಿಗೆಡಬೇಡಿ (Dont get lost)**

ಕಾಡು ಮೇಡುಗಳಲ್ಲಿ, ನೀವೊಬ್ಬರೇ ಸುತ್ತುತ್ತಿರುವಾಗ, ಮೈಮರೆತಂತೆ ಆಗಿ, ನೀವು ಹೋಗುತ್ತಿರುವ ದಿಕ್ಕನ್ನು ಗಮನಿಸಲು ಮರೆತುಬಿಡಬಹುದು. ದಾರಿಯಲ್ಲಿ ಅಡ್ಡಬಂದ ಬಿದ್ದುಹೋದ ಮರ, ಕಲ್ಲುಬಂಡೆ ಅಥವಾ ಇತರ ಅಚಲ ವಸ್ತುಗಳನ್ನು ಬಳಸಿ ಮುಂದುವರೆಯುವಾಗ ಅರಿವಿಲ್ಲದೆಯೇ ನಿಮ್ಮ ದಿಕ್ಕು ಬದಲಾಗಿಬಿಡುತ್ತದೆ. ಸಾಮಾನ್ಯವಾಗಿ ಜನರು ಮುಂದೆ ಹೋಗುತ್ತಾ ಹೋಗುತ್ತಾ ಸ್ವಲ್ಪ ಸ್ವಲ್ಪವೇ ಬಲಗಡೆಗೆ ಸರಿಯುತ್ತಿರುತ್ತಾರೆ. ಪರಿಣಾಮವಾಗಿ ನೀವು ಸೀದಾ ಹೋಗುತ್ತಿರುವುದಾಗಿ ಭಾವಿಸಿದರೂ ಸಹಜವಾಗಿ ಹಾಗೆ ಹೋಗುತ್ತಿರುವುದಿಲ್ಲ. ಸೂರ್ಯ, ದಿಕ್ಸೂಚಿ ಮತ್ತು ಇತರ ಹೆಗ್ಗುರುತುಗಳ ಆಧಾರವಿಲ್ಲದೆ ಇದ್ದರೆ ನೀವು ಒಂದು ದೊಡ್ಡ ವೃತ್ತಾಕಾರದಲ್ಲಿ ಸುತ್ತುತ್ತಿರುತ್ತೀರಿ.

ಅಂತಹ ಸಂದರ್ಭದಲ್ಲಿ ಪ್ರವೇಶಕನು ದಾರಿ ತಪ್ಪಿತೆಂದು ತೋಚಿದರೆ ಸಾಕು ಉದ್ವಿಗ್ನನಾಗಿ ಕಂಗಾಲಾಗುತ್ತಾನೆ. ಬಹುಶಃ ಓಡಲು ಪ್ರಯತ್ನಿಸುತ್ತಾನೆ. ಅಂತಹ ಸಮಯದಲ್ಲಿ ಅವನು ಶಾಂತ ರೀತಿಯಲ್ಲಿ ಯೋಚಿಸಿ ಉಪಯುಕ್ತ ರೀತಿಯಲ್ಲಿ ನಡೆದುಕೊಳ್ಳಬೇಕು. ಎಂದರೆ ನಿಮ್ಮ ಹೆಜ್ಜೆ ಗುರುತು ಹಿಡಿದು ಹಿಂದಕ್ಕೆ ಹೋಗುವುದು ಅಥವಾ ಕಟ್ಟಿಗೆ, ಸೌದೆ ಜಮಾಯಿಸಿ ಬೆಂಕಿ ಹೊತ್ತಿಸಿ ನಿಮಗಾಗಿ ಹುಡುಕುತ್ತಿರುವವರಿಗೆ ಹೊಗೆಯ ಮೂಲಕ ಸಂಕೇತ ನೀಡುವುದು ಮಾಡಬೇಕು.

ಅಂತಹ ಸಮಯದಲ್ಲಿ ಧೃತಿಗೆಡದೆ ಇರುವುದು ಬಹಳ ಮುಖ್ಯವಾದುದು.

**ದಿಕ್ಕನ್ನು ಗಮನಿಸಿ**

ನಡಿಗೆಗಾಗಲೀ ಗಸ್ತು ತಿರುಗಲಾಗಲೀ, ಹೊರಡುವ ಮುನ್ನ ದಿಕ್ಸೂಚಿಯ ಸಹಾಯದಿಂದ ಮೊದಲು ದಿಕ್ಕನ್ನು ಗಮನಿಸಿ. ನಿಮ್ಮಲ್ಲಿ ದಿಕ್ಸೂಚಿ ಇಲ್ಲದಿದ್ದರೆ ಅಥವಾ ಸೂರ್ಯನು ಪ್ರಕಾಶಮಾನನಾಗಿಲ್ಲದಿದ್ದರೆ, ಗಾಳಿ ಬೀಸುವ ದಿಕ್ಕು ಬಹಳ ಉಪಕಾರಿಯಾಗುತ್ತದೆ.

ಎಲ್ಲಾ ಹಿರಿಯ ಸ್ಕೌಟುಗಳೂ ಬೆಳಗಾಗೆದ್ದಕೂಡಲೇ ಗಾಳಿಯು ಬೀಸುವ ದಿಕ್ಕನ್ನು ಗಮನಿಸುತ್ತಾರೆ.

ಗಾಳಿಯು ಜೋರಾಗಿ ಬೀಸುತ್ತಿಲ್ಲವಾದರೆ ಒಣಹುಲ್ಲಿನ ಚೂರುಗಳು ಅಥವಾ ಧೂಳನ್ನು ಗಾಳಿಯಲ್ಲಿ, ಕೈಯೆತ್ತಿ ಮೇಲಿನಿಂದ ನಿಧಾನವಾಗಿ ತೂರಿದರೆ, ಅದರ ಚಲನೆಯಿಂದ ಗಾಳಿಯ ದಿಕ್ಕನ್ನು ತಿಳಿದುಕೊಳ್ಳಬಹುದು. ಹಾಗಲ್ಲದಿದ್ದರೆ ಹೆಬ್ಬೆರಳನ್ನು ನೀರಿನಲ್ಲದ್ದಿ ಮೇಲೆ ಹಿಡಿದರೆ ಅದು ತಣ್ಣಗೆ ಭಾಸವಾಗುವ ಪಾರ್ಶ್ವದಲ್ಲಿ ಗಾಳಿಯು ಬೀಸುತ್ತಿದೆಯೆಂದು ಹೇಳಬಹುದು.

**ಹೆಗ್ಗುರುತುಗಳನ್ನು ಉಪಯೋಗಿಸಿಕೊಳ್ಳುವುದು**

ದಾರಿಯನ್ನು ಕಂಡುಕೊಳ್ಳಲು ಎಲ್ಲಾ ಹೆಗ್ಗುರುತುಗಳನ್ನೂ ಗಮನಿಸಬೇಕು.

ಹಳ್ಳಿಗಾಡಿನಲ್ಲಿ ಹೆಗ್ಗುರುತುಗಳೆಂದರೆ ಬೆಟ್ಟಗುಡ್ಡಗಳು, ಗುಡಿಗೋಪುರಗಳು, ಉನ್ನತ ಕಟ್ಟಡ ಶಿಖರಗಳು, ಬಂಡೆಗಳು, ವಿಚಿತ್ರವಾಗಿ ಕಾಣುವ ಮರಗಳು, ಹೆಬ್ಬಾಗಿಲುಗಳು, ದಿಬ್ಬಗಳು, ಸೇತುವೆ, ಅಥವಾ ಇತರೆ ಯಾವುದು ದೊಡ್ಡ ಆಕರ್ಷಕ ಸ್ಥಾಯಿ ಬಿಂದುಗಳನ್ನು ಗಮನದಲ್ಲಿಟ್ಟುಕೊಂಡರೆ ನೀವು ಅದೇ ದಾರಿಯಲ್ಲಿ ಹಿಂದಿರುಗಲು ಸಹಾಯವಾಗುತ್ತದೆ ಅಥವಾ ಇತರರಿಗೆ ಮಾರ್ಗದರ್ಶನ ನೀಡಲು ಬರುತ್ತದೆ. ಮುಂದೆ

ಹೋಗುವಾಗ ಆಗಾಗ್ಗೆ ಅವುಗಳನ್ನು ಗಮನಿಸುತ್ತಾ, ಆಗೊಮ್ಮೆ ಈಗೊಮ್ಮೆ ಹಿಂದಿರುಗಿ ಅವುಗಳನ್ನು ನೋಡುತ್ತಾ ಮುಂದುವರೆದರೆ ಹಿಂದಿರುಗುವಾಗ ಅವುಗಳನ್ನು ಗುರುತು ಹಿಡಿಯತ್ತಾ ಸುಲಭವಾಗಿ ವಾಪಸ್ಸಾಗಬಹುದು.

ಇದೇ ಅಂಶವನ್ನು ನೀವು ಹೊಸ ಜಾಗದಲ್ಲಿ, ರೈಲಿನಿಂದಿಳಿದಾಗ ನೆನಪಿಟ್ಟುಕೊಳ್ಳಿ, ರೈಲಿನಿಂದಿಳಿದು ನಿಲ್ದಾಣದಿಂದ ಹೊರಗೆ ಬಂದಕೂಡಲೇ ಸೂರ್ಯನು ಯಾವ ಕಡೆಗಿದ್ದಾನೆ? ಹೊಗೆಯು ಯಾವ ಕಡೆ ಹೋಗುತ್ತಿದೆ? ಬಂದಕೂಡಲೇ ಕಂಡು ಬರುವ ಹೆಗ್ಗುರುತುಗಳೇನು? ಉದಾಹರಣೆಗೆ ಕಟ್ಟಡಗಳು, ದೇವಾಲಯಗಳು, ಕಾರ್ಖಾನೆಗಳ ಹೊಗೆ ಚಿಮಣಿಗಳು, – ರಸ್ತೆಗಳು ಮತ್ತು ಅಂಗಡಿಗಳ ಹೆಸರುಗಳೂ ಇತ್ಯಾದಿ. ಇದರಿಂದ ನೀವು ಹಲವಾರು ರಸ್ತೆಗಳನ್ನು ದಾಟಿದ್ದರೂ ಸುಲಭವಾಗಿ ನಿಲ್ದಾಣಕ್ಕೆ ವಾಪಸ್ ಬರಲು ಅನುಕೂಲವಾಗುತ್ತದೆ. ಅಭ್ಯಾಸ ಮಾಡಿಕೊಂಡ ಮೇಲಂತೂ ನಿಮಗೆ ಬಹಳ ಸುಲಭವಾಗಿಬಿಡುತ್ತದೆ. ಇಷ್ಟಂತೂ ನಿಜ. ಅನೇಕರು ಹೊಸ ಜಾಗದಲ್ಲಿ ಬಂದಿಳಿದಾಗ ಒಂದೆರಡು ರಸ್ತೆಗಳಲ್ಲಿ ತಿರುಗುವುದರೊಳಗೆ, ದಾರಿತಪ್ಪಿ ಭಯ ವಿಹ್ವಲರಾಗುತ್ತಾರೆ.

**ನೀವು ಮಾಡುವ ಕೆಲಸದಲ್ಲಿ ಏಕಾಗ್ರಚಿತ್ತರಾಗಿ (Concentrate on your Job)**

ಸ್ಕೌಟಾಗಿ ಕೆಲಸ ಮಾಡುವಾಗ ಅಥವಾ ಇತರರಿಗೆ ಮಾರ್ಗದರ್ಶಕರಾಗಿರುವಾಗ ನೀವು ಮುಂದಾಲೋಚಿಸ ಬೇಕು. ನಿಮ್ಮ ಕೆಲಸದಲ್ಲಿ ಸಂಪೂರ್ಣವಾಗಿ ನಿಮಗ್ನರಾಗಿಬೇಕು. ಎಲ್ಲಾ ಚಿಹ್ನೆಗಳನ್ನೂ, ಕುರುಹುಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಬೇಕು. ನೀವು ಮಾತನಾಡುತ್ತಿದ್ದರೆ ಅಥವಾ ಬೇರೆ ಯೋಚನೆ ಮಾಡುತ್ತಿದ್ದರೆ, ಈ ರೀತಿ ಸೂಕ್ಷ್ಮವಾಗಿ ಗಮನಹರಿಸಲಾಗುವುದಿಲ್ಲ. ಹಿರಿಯ ಸ್ಕೌಟುಗಳು ಸಾಮಾನ್ಯವಾಗಿ ಮೌನದಿಂದಿರುತ್ತಾರೆ. ತಾವು ಮಾಡುತ್ತಿರುವ ಕೆಲಸದಲ್ಲಿ ಪೂರ್ಣವಾಗಿ ಮಗ್ನರಾಗಿರುತ್ತಾರೆ.

ಕೋಮಲಪಾದನು / ಪ್ರವೇಶಕನು, ಮೊದಲಬಾರಿಗೆ ಹೊರಗೆ ಹೊರಟಾಗ ತನ್ನ ನಾಯಕ ಸ್ಕೌಟು ಒಬ್ಬಂಟಿಗನಾಗಿರುವುದರಿಂದ ಮೌನಿಯಾಗಿರುವುದಾಗಿ ಭಾವಿಸಿ ಅವನೊಡನೆ ಹೆಜ್ಜೆ ಹಾಕುತ್ತಾ ಅಥವಾ ಸೈಕಲ್ ತುಳಿಯುತ್ತಾ ಮಾತನಾಡಿಸಲು ಪ್ರಯತ್ನಿಸುತ್ತಾನೆ. ಆದರೆ ಆ ನಾಯಕ ಸ್ಕೌಟು ತನ್ನ ಹಾವ ಭಾವಗಳಿಂದ ಅಸಮ್ಮತಿಯನ್ನು ವ್ಯಕ್ತಪಡಿಸಿದಾಗ ಅವನು ಸುಮ್ಮನಾಗ ಬೇಕಾಗುತ್ತದೆ.

ಸಣ್ಣ ನೌಕೆಗಳಲ್ಲಿಯೂ, ಬಸ್ಸುಗಳಲ್ಲಿಯೂ, ಸಾಮಾನ್ಯವಾಗಿ ಒಂದು ಸೂಚನೆಯನ್ನು ಕಾಣಬಹುದು. "ಚಾಲಕನನ್ನು ಮಾತನಾಡಿಸಬೇಡಿ." ನಿಮಗೆ ಮಾರ್ಗದರ್ಶನ ಮಾಡುತ್ತಿರುವ, ನಾಯಕ ಸ್ಕೌಟ್ ಬಗ್ಗೆಯೂ ಇದು ಅನ್ವಯಿಸುತ್ತದೆ.

........................ಮುಂದುವರೆಯುತ್ತದೆ

## Four Looks of Life



**Look Back - Thank God**



**Look Front - Trust God**

**Look Around - Serve God**

**Look Within - Find God**

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227


*We want that Education by Which Character is formed.*

*- Swami Vivekananda*

*The light of the body is the eye: if, therefore, your eye be Controlled, thy whole body shall be full of light.*

*- Jesus Christ*

*It is better to teach knowledge one hour in the night, than to pray the whole night*

*- Prophet Muhammad*

*Honour and nurse parents and Elders*

*- Lord Buddha*

*Humility is of five kinds: Humility in faith, in knowledge, in Conduct, in penance and in decorum or etiquette. These lead to liberation*

*- Lord Mahavir*




**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು










# ಬಿಡಿಎ-ಆಧುನಿಕ ಬೆಂಗಳೂರಿನ ಶಿಲ್ಪಿ



ಶ್ರೀ ಬಿ.ಎಸ್.ಯಡಿಯೂರಪ್ಪ
ಸನ್ಮಾನ್ಯ ಮುಖ್ಯಮಂತ್ರಿಗಳು

ಬೆಂಗಳೂರು ಜಗತ್ತಿನಲ್ಲೇ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಕೆಲವೇ ಮಹಾ ನಗರಗಳಲ್ಲೊಂದು. 2021ರ ವೇಳೆಗೆ ಇಲ್ಲಿಯ ಜನಸಂಖ್ಯೆ 1 ಕೋಟಿ ತಲುಪಲಿದೆ. ಭಾರತದ ತಂತ್ರಜ್ಞಾನ ರಾಜಧಾನಿ, ಸಿಲಿಕಾನ್ ವ್ಯಾಲಿ ಬೆಂಗಳೂರು ರಾಷ್ಟ್ರದ ಆರ್ಥಿಕ ಬೆಳವಣಿಗೆಯಲ್ಲಿ ಅತಿ ಮುಖ್ಯ ಪಾತ್ರ ವಹಿಸುತ್ತಿದೆ. ಬೆಂಗಳೂರಿನ ಈ ಭಾರೀ ಮುನ್ನಡೆಗೆ ಇಲ್ಲಿನ ಔದ್ಯಮಿಕ - ಬೌದ್ಧಿಕ ಸಾಮರ್ಥ್ಯಗಳು, ನಿರಂತರ ಪ್ರಗತಿಪರ ಖಾಸಗೀ, ಸರ್ಕಾರೀ ಕಾರ್ಯ ಚಟುವಟಿಕೆಗಳೇ ಕಾರಣ.

ಇಂದು ಅಂತರರಾಷ್ಟ್ರೀಯ ಮಹಾನಗರವಾಗುತ್ತಿರುವ ಬೆಂಗಳೂರಿನ ರಭಸದ ಬೆಳವಣಿಗೆಗೆ ಅಗತ್ಯವಾದ ಭಾರಿ ಪ್ರಮಾಣದ ವಸತಿ ಸೌಲಭ್ಯ, ರಸ್ತೆ, ಉತ್ತಮ ಸಾರಿಗೆ ವ್ಯವಸ್ಥೆ ಮೌಲ್ಯಾಧಾರಿತ ಸೇವೆ ಸೌಕರ್ಯಗಳನ್ನು ಒದಗಿಸುವ ಕಾರ್ಯಗಳು ನಿರಂತರವಾಗಿ ಅಷ್ಟೇ ರಭಸದಿಂದ ಸಾಗುತ್ತಿವೆ.

ಬೆಂಗಳೂರಿನ ಸಮರ್ಪಕ ಬೆಳವಣಿಗೆ, ಅಭಿವೃದ್ಧಿ ಹಾಗೂ ನಿರ್ವಹಣೆಗಾಗಿಯೇ ಜನ್ಮ ತಳೆದ ಬಿಡಿಎ (ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ) ತನ್ನ 30 ವರ್ಷಗಳ ಸಾರ್ಥಕ ಜೀವನಾವಧಿಯಲ್ಲಿ ಮಹಾನಗರದ ಬೆಳವಣಿಗೆಗೆ ಹೊಸ ತಿರುವು ನೀಡಿ, ಬೆಂಗಳೂರಿನ ಸರ್ವಾಂಗೀಣ ಅಭಿವೃದ್ಧಿಯ ಆಧಾರ ಸ್ತಂಭವಾಗಿ ಬೆಳೆದು ನಿಂತಿದೆ.

## ವಸತಿ ಸೌಲಭ್ಯ ಪೂರೈಕೆಯಲ್ಲಿ ಬಿಡಿಎ ಇಷ್ಟು ವರ್ಷಗಳಲ್ಲಿ ಸಾಧಿಸಿರುವ ಅಪೂರ್ವ ಸಾಧನೆಗಳು.

- **ನಿರ್ಮಿಸಿರುವ ಬಡಾವಣೆಗಳು** - ಮಲ್ಲೇಶ್ವರಂ, ಬಸವನಗುಡಿ, ಮೊದಲ್ಗೊಂಡು ಏಷ್ಯದ ಅತಿದೊಡ್ಡ ಮತ್ತು ಅತ್ಯುತ್ತಮ ಯೋಜಿತ ಬಡಾವಣೆಗಳಾದ ಜಯನಗರ, ಕೋರಮಂಗಲ, ಬಿಟಿಎಂ, ಎಚ್ಎಸ್ಆರ್, ಆರ್ಎಂವಿ, ಇಂದಿರಾನಗರ, ಎಚ್ಬಿಆರ್, ವಿಜಯನಗರ, ಎಚ್ಆರ್ಬಿಆರ್, ಬಿಎಸ್‌ಕೆ ಬಡಾವಣೆಗಳು ಇತ್ತೀಚಿನ ಅರ್ಕಾವತಿ ಬಡಾವಣೆಯವರೆಗೆ ಸುಮಾರು 62 ಬಡಾವಣೆಗಳನ್ನು ರೂಪಿಸಿದೆ. ಇದರ ಮೂಲಕ ಸುಮಾರು 2 ಲಕ್ಷ ವಸತಿ ನಿವೇಶನಗಳನ್ನು ಸೃಷ್ಟಿಸಿದೆ.
- ನಗರದ ಸಮತೋಲನವಾದ ಬೆಳವಣಿಗೆಗೆ ಮತ್ತು ಸಾಂಸ್ಥಿಕ ಚಟುವಟಿಕೆಗಳಿಗಾಗಿ ನಾಗರಿಕರ ಸೌಲಭ್ಯದ (ಸಿಎ) ನಿವೇಶನಗಳನ್ನು ರೂಪಿಸಿ ನಗರಕ್ಕೆ ಒಂದು ಹೊಸ ರೂಪ ಕೊಟ್ಟಿದೆ. ನ್ಯಾಷನಲ್ ಪಬ್ಲಿಕ್ ಸ್ಕೂಲ್, ಸೋಫಿಯಾ ಹೈಸ್ಕೂಲ್, ಪ್ರೆಸಿಡೆನ್ಸಿ ಸ್ಕೂಲ್, ಸ್ಟೆಲ್ಲಾ ಮೇರಿಸ್ ಸ್ಕೂಲ್, ಬೆಥಾನಿ ಸ್ಕೂಲ್ ಮುಂತಾದ ಹೆಸರಾಂತ ಶಾಲೆಗಳು ಹಾಗೂ ನ್ಯಾಷನಲ್ ಕಾಲೇಜ್, ಮೌಂಟ್ ಕಾರ್ಮೆಲ್ ಕಾಲೇಜ್, ವಿಜಯ ಕಾಲೇಜ್, ಜ್ಯೋತಿ ನಿವಾಸ್ ಕಾಲೇಜ್, ಎನ್ಐಎಫ್‌ಟಿ, ಐಎಸ್ಎಸ್ ಶಿಕ್ಷಣ ಸಂಸ್ಥೆಗಳು, ರಮಣ ಮಹರ್ಷಿ ಅಕಾಡೆಮಿ ಫಾರ್ ಬ್ಲೈಂಡ್, ಎನ್ಎಂಕೆಆರ್‌ವಿ ಮುಂತಾದ ಪ್ರತಿಷ್ಠಿತ ಕಾಲೇಜುಗಳಿಗೆ ನಿವೇಶನಗಳನ್ನು ಒದಗಿಸಿದೆ.
- ನಾಗರಿಕರ ಮನರಂಜನೆ, ಸೌಕರ್ಯ, ಆರೋಗ್ಯ, ಕಲೆ, ಸಾಹಿತ್ಯ, ಸಂಸ್ಕೃತಿಯ ಪ್ರವರ್ಧನೆಗೂ ಬಿಡಿಎ ಆದ್ಯತೆ ನೀಡಿದೆ. ಕ್ಲಬ್‌ಗಳು, ಅಂಚೆ ಕಚೇರಿಗಳು, ಕ್ರೀಡಾಂಗಣ, ರಂಗಮಂದಿರ ಆಸ್ಪತ್ರೆಗಳಿಗೆ ಸೂಕ್ತ ನಿವೇಶನ ನೀಡಿದೆ. ಮೋದಿ ಆಸ್ಪತ್ರೆ, ಬೆಂಗಳೂರು ಕಿಡ್ನಿ ಫೌಂಡೇಶನ್, ಬೆಂಗಳೂರು ವೈದ್ಯಕೀಯ ಮತ್ತು ಕ್ಯಾನ್ಸರ್ ಸಂಶೋಧನಾ ಕೇಂದ್ರ ಮುಂತಾದ ಆಸ್ಪತ್ರೆಗಳು, ಚೌಡಯ್ಯ ಸ್ಮಾರಕ ಭವನ, ರಂಗ ಶಂಕರ, ಲಲಿತಕಲಾ ಮಂದಿರದಂತಹ ಸಾಂಸ್ಕೃತಿಕ ಕೇಂದ್ರಗಳು ಮುಂತಾದವುಗಳು ಬಿಡಿಎ ರೂಪಿಸಿರುವ ಸಿಎ ನಿವೇಶನಗಳಲ್ಲಿ ತಲೆಯತ್ತಿವೆ.

## ಪರಿಸರ ಕಾಳಜಿ

- ಎಲ್ಲಾ ವಸತಿ ಪ್ರದೇಶಗಳಲ್ಲಿ ಉದ್ಯಾನಗಳ ನಿರ್ಮಾಣ ಮತ್ತು ಬಯಲು ಸ್ಥಳಗಳ ಅನುಕೂಲಕ್ಕೆ ವ್ಯವಸ್ಥೆ.
- ಕೆರೆಗಳ ಸಂರಕ್ಷಣೆ - ನಗರದ ಸೌಂದರ್ಯ ಮತ್ತು ವಾತಾವರಣ ಕಾಪಾಡಲು ಪ್ರಯತ್ನ, ಲಾಲ್‌ಬಾಗ್, ಬೆನ್ನಿಗಾನಹಳ್ಳಿ ಮತ್ತು ಅಗರ ಕೆರೆಗಳ ನವೀಕರಣ ಮತ್ತು ನಿರ್ವಹಣೆ.

## ಮೂಲಸೌಕರ್ಯ ಅಭಿವೃದ್ಧಿಗೆ ಆದ್ಯಗಮನ

- ಇಂದಿರಾನಗರ, ಬನಶಂಕರಿ, ಎಚ್ಎಸ್ಆರ್ ಬಡಾವಣೆ, ಎಚ್ಬಿಆರ್ ಬಡಾವಣೆ ಮುಂತಾದ ವಿವಿಧ ಬಡಾವಣೆಗಳಲ್ಲಿ 15 ವಾಣಿಜ್ಯ ಸಂಕೀರ್ಣಗಳ ನಿರ್ಮಾಣ.
- ನಗರದ ವಾಹನ ಸಂಚಾರ ದಟ್ಟಣೆಯನ್ನು ತಪ್ಪಿಸಲು ಮತ್ತು ವಾಹನಗಳ ಸುಲಲಿತ ಸಂಚಾರಕ್ಕಾಗಿ ಹೊರ ವರ್ತುಲ ರಸ್ತೆ ನಿರ್ಮಾಣದ ಜೊತೆಗೆ ಹಲವಾರು ಸಂಚಾರ ವ್ಯವಸ್ಥೆ. ಡೈರಿ ವೃತ್ತ, ವೈಟ್‌ಫೀಲ್ಡ್ ರಸ್ತೆ, ಕೇಂದ್ರ ರೇಷ್ಮೆ ಮಂಡಳಿ, ಹೆಬ್ಬಾಳ, ಆನಂದರಾವ್ ವೃತ್ತ, ವಿಮಾನ ನಿಲ್ದಾಣ ರಸ್ತೆ ಮತ್ತು ಜಯದೇವ ಆಸ್ಪತ್ರೆ ಜಂಕ್ಷನ್‌ನಲ್ಲಿ ಏಳು ಹೊಸ ಗ್ರೇಡ್ ಸೆಪರೇಟರ್‌ಗಳ ನಿರ್ಮಾಣ.

## ವಿಶೇಷ ಚಟುವಟಿಕೆಗಳು

- ಬಿಡಿಎ ಆಧುನಿಕತೆಯ ವಾತಾವರಣಕ್ಕೆ ಸರಿಸಾಟಿಯಾಗಿ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಣೆ ಮಾಡುತ್ತಾ ಸಾಗಿದೆ. ಆರೋಗ್ಯ ಕ್ಷೇತ್ರಕ್ಕೂ ಅಡಿ ಇಟ್ಟಿದೆ. ಬೌರಿಂಗ್ ಆಸ್ಪತ್ರೆಯಲ್ಲಿ ಅಪಘಾತ ತುರ್ತು ಚಿಕಿತ್ಸಾ ವಿಭಾಗ ನಿರ್ಮಿಸಿದೆ.
- ಆಧುನಿಕ ಸ್ವರೂಪದ ತ್ಯಾಜ್ಯ ನೀರಿನ ಸಂಸ್ಕರಣಾ ಸ್ಥಾವರದ ಸ್ಥಾಪನೆ ಮೂಲಕ ಲಾಲ್‌ಬಾಗ್ ಮತ್ತು ಕಬ್ಬನ್ ಪಾರ್ಕ್‌ನಲ್ಲಿ ಮಾಲಿನ್ಯ ನೀರು ಶುದ್ಧೀಕರಣದಲ್ಲಿ ಹೊಸ ಅಧ್ಯಯ ಆರಂಭಿಸಿದೆ.
- ಲಾಲ್‌ಬಾಗ್ ಗಾಜಿನ ಮನೆ ಮತ್ತು ಗಾಂಧಿ ಭವನವನ್ನು ನವೀಕರಿಸಿ ಐತಿಹಾಸಿಕ ಸ್ಮಾರಕಗಳ ಸಂರಕ್ಷಣಾ ಕಾರ್ಯಕ್ಕೂ ತನ್ನನ್ನು ತೊಡಗಿಸಿಕೊಂಡಿದೆ.

## ದೂರದೃಷ್ಟಿಯ ಯೋಜನೆಗಳು

- ಪೆರಿಫೆರಲ್ ವರ್ತುಲ ರಸ್ತೆ ನಿರ್ಮಾಣದ ಮೂಲಕ ಸಂಚಾರ ವ್ಯವಸ್ಥೆಯಲ್ಲಿ ಕ್ರಾಂತಿಕಾರಕ ಪರಿವರ್ತನೆ ತರುವ ನಿಟ್ಟಿನಲ್ಲಿ ಬಿ.ಡಿ.ಎ. ಕಾರ್ಯೋನ್ಮುಖವಾಗಿದೆ.

## ನಗರದ ಸುತ್ತ ಹೊಸ ಬಡಾವಣೆಗಳು

- ನಗರದ ಹೊರವಲಯದಲ್ಲಿ ಸುಮಾರು 56 ಗ್ರಾಮಗಳನ್ನು ಒಳಗೊಂಡಂತೆ ಐದು ಪರಿಸರ ಸ್ನೇಹಿ ಬಡಾವಣೆ ನಿರ್ಮಿಸಲು ನಿರ್ಧರಿಸಿದೆ. ಭೂ ಮಾಲೀಕರ ಸಕ್ರಿಯ ಪಾಲ್ಗೊಳ್ಳುವಿಕೆ ಮತ್ತು ಸಹಕಾರದೊಡನೆ ಈ ಕಾರ್ಯ ಸಾಧನೆ.
- ಸಾರ್ವಜನಿಕರಿಗೆ ವಿವಿಧ ಅಳತೆಗಳ 90,000 ನಿವೇಶನಗಳ ಹಂಚಿಕೆಗೆ ಯೋಜನೆ.
- ಈಗಾಗಲೇ ಕೆಂಪೇಗೌಡ ಬಡಾವಣೆ ನಿರ್ಮಾಣದ ಪ್ರಕ್ರಿಯೆ ಆರಂಭವಾಗಿದೆ.

## ಕೆರೆಗಳ ಸಮಗ್ರ ಅಭಿವೃದ್ಧಿ

- ಕೆರೆಗಳ ಸಮಗ್ರ ಅಭಿವೃದ್ಧಿಗಾಗಿ ಸಣ್ಣ ನೀರಾವರಿ ಮತ್ತು ಜಿಲ್ಲಾ ಪಂಚಾಯತ್ ಒಟ್ಟು 12 ಕೆರೆಗಳನ್ನು ಬಿಡಿಎಗೆ ವಹಿಸಿದೆ. ಅಭಿವೃದ್ಧಿಪಡಿಸಲಾಗುವ ಕೆರೆಗಳು - ಉಲ್ಲಾಳ, ಮಲ್ಲತ್ತಹಳ್ಳಿ, ಕೊಮ್ಮಗಟ್ಟ, ರಾಮಸಂದ್ರ, ಜಕ್ಕೂರು, ಪಚೇನಹಳ್ಳಿ, ಸಂಪಿಗೆಹಳ್ಳಿ, ವೆಂಕಟೇಶ್‌ಪುರ, ಸೋಮಾಪುರ, ಕೋಣಸಂದ್ರ, ತಲಗಟ್ಟಪುರ ಮತ್ತು ಕೊತ್ತನೂರು ಕೆರೆಗಳು.

## ಪರಿಷ್ಕೃತ ಮಾಸ್ಟರ್ ಯೋಜನೆ 2015

- ಮುಂಬರುವ ಹತ್ತು ವರ್ಷಗಳಿಗೆ ಈ ಯೋಜನೆ. 1,219.50 ಚ.ಕಿ.ಮೀ.ಗಳ ಸ್ಥಳೀಯ ಯೋಜನಾ ಪ್ರದೇಶ ಈ ಯೋಜನೆಗೆ ಸೇರ್ಪಡೆ. ಗ್ರೇಟರ್ ಬೆಂಗಳೂರು ಪ್ರದೇಶವೂ ಇದಕ್ಕೆ ಸೇರ್ಪಡೆ.



**ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ**

ಟಿ. ಚೌಡಯ್ಯ ರಸ್ತೆ, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು-20
www.bdabangalore.org

ಬಿಡಿಎ ಮುಂದಾಳತ್ವದಲ್ಲಿ ಬೆಂಗಳೂರು ಅಭಿವೃದ್ಧಿ ಪಥದಲ್ಲಿ

Regd as News Paper (Magazine) No : CPMG/KA/BGW-549/2009-11 Permitted to Post under WPP System
Vide No.: WPP-87 of SSP, Bangalore West. Posted at: Mail Business Centre, Bangalore GPO on 05-03-2010




**Sri A. Deva prakash, District Chief Commissioner & Joint Director (DSERT) along with office Bearers of Bangalore North District presenting Cheque of Rs. 1,01,021/- towards the Karnataka Flood Relief Fund to Sri. Kondajji B. Shanmukhappa, State Chief Commissioner. on 13th January 2010 at Stracy Memorial School, St, Mark's Road, Bangalore**

View of the participants at Republic Day Celebrations held on 26th January 2010











Raichur

8. SRI.KONDAJJI B.SHANMUKHAPPA
State Chief Commissioner
Bharat Scouts and Guides, Karnataka
'Nagashree', # 23, 14th 'A' Cross,
2nd Stage, 2nd Phase,
West of Chord Road,
Mahalakshmipuram, Bangalore-560086.



If not delivered, please return to :
**THE EDITOR, Karnataka Scout & Guide
State Headquarters, Kondajji Basappa Rd.
Prof. P. Sivashankar Circle, Fort
Bangalore - 560 002. Ph:26701227**

Published for : The Bharat Scouts & Guides, Karnataka, State Headquarters, Fort, Bangalore - 560 002. by the State Secretary
Printed at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore-560 026.
visit our website "www.scout.org.in" for details of Scout/Guide activities & On-line Karnataka Scout & Guide Magazine